

# ಸಪ್ತಗಿರಿ

ಬ್ರವರಿ
**1986**

ಬೆಲೆ: ರೂ

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ದೇವಬಂದ ನಮ್ಮ ಸ್ವಾಮಿ ಬಂದಾ
ದೇವರ ದೇವ ಶಿಖಾಮಣಿ ಬಂದಾ ॥ ಪ ॥

ಉರಗಶಯನ ಬಂದ ಗರುಡಗಮನ ಬಂದ
ನರಗೊಲಿದವ ಬಂದ ನಾರಾಯಣ ಬಂದ ॥ 1 ॥

ಮಂದರೋದ್ಧರ ಬಂದ ಮಾಮನೋಹರ ಬಂದ
ವೃಂದಾವನ ಪತಿ ಬಂದ ಗೋವಿಂದ ಬಂದ ॥ 2 ॥

ನಕ್ರಹರನು ಬಂದ ಚಕ್ರಧರನು ಬಂದ
ಅಕ್ರೂರಗೊಲಿದ ಬಂದ ತ್ರಿವಿಕ್ರಮ ಬಂದ ॥ 3 ॥

ಪಕ್ಷಿವಾಹನ ಬಂದ ಲಕ್ಷ್ಮಣಾಗ್ರಜ ಬಂದ
ಅಕ್ಷಯ ಫಲದ ಶ್ರೀ ಲಕ್ಷ್ಮೀರಮಣ ಬಂದ ॥ 4 ॥

ನಿಗಮಗೋಚರ ಬಂದ ನಿತ್ಯತೃಪ್ತನು ಬಂದ
ನಗೆ ಮುಖದ ಪುರಂದರ ವಿಠಲ ಬಂದ ॥ 5 ॥

—ಶ್ರೀಪುರಂದರದಾಸರು.




ಮಾನವನ ಚಟುವಟಿಕೆಗಳಲ್ಲಿ ಕಿರೀಟ ಅತ್ಯುನ್ನತವಾದದ್ದು. ನಮ್ಮ ಸಾಧಾರಣ ನಿರೀಕ್ಷೆಗೆ ಗುಣಾತ್ಮಕವಾಗಿ ಮೀರಿದ್ದನ್ನು ಕಿರೀಟಪ್ರಾಯವೆನ್ನುತ್ತೇವೆ. ದೇವರ ವಿಷಯದಲ್ಲೂ ಹಾಗೇ.

ಮನುಷ್ಯ ಸಗುಣಾರಾಧನೆಯ ಸೌಲಭ್ಯಗಳನ್ನು ತಿಳಿದುಕೊಂಡಂದಿನಿಂದಲೂ ದೈವವನ್ನು ತನ್ನರೂಪದಲ್ಲೇ ಪರಿಕಲ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ. ಈ ಒಂದು ಸಾಮಾಜಿಕ ಆಧ್ಯಾತ್ಮಿಕ ಅಭ್ಯುದಯದ ಕ್ರಿಯೆಯಲ್ಲಿ ದೈವದ ಶಿಷ್ಟರಕ್ಷಣ, ದುಷ್ಟಶಿಕ್ಷಣ ಗುಣವು ರಾಜಾ ಪ್ರತ್ಯಕ್ಷ ದೇವತಾ ಎಂಬ ಗೌರವವನ್ನು ಪಡೆಯಿತು. ರಾಜತ್ವದ ಪರಿಕಲ್ಪನೆಯಿಂದಲೇ, ಮಾನವನಲ್ಲಿ, ಮೊದಲಿಗೆ ಸ್ವ-ಇಚ್ಛೆಯಿಂದಲೂ ನಂತರದಲ್ಲಿ ಒತ್ತಡಗಳಿಂದಲೂ, ತನ್ನಲ್ಲಿನ ಹಲವು ಆಸ್ತಿ-ಭಾವಗಳನ್ನು-ವಸ್ತು ವಿಷಯಗಳನ್ನು ಅದಕ್ಕೆ (ರಾಜತ್ವಕ್ಕೆ) ಅಧೀನಗೊಳಿಸಬೇಕಾಗಿ ಬಂದಿತು. ಆದರೆ ದೈವದ ವಿಷಯದಲ್ಲಿ ಮನುಷ್ಯನ ಸಾಧನೆಯೇ ಬೇರೊಂದು ರೀತಿಯದಾಯಿತು. ದೇಹ ಪಂಜರದಲ್ಲಿ ವಾಸಿಸುವ ನಿತ್ಯ ಮುಕ್ತ ಆತ್ಮನ ಅವಿಚ್ಛಿನ್ನತೆಯನ್ನು ಅರಿತುಕೊಂಡ ಮಾನವ ದೈವವನ್ನು ತನ್ನಂತೆಯೇ, ಆದರೆ ತನಗಿಂತ ಹಿರಿಯನಾಗಿ ಕಂಡುಕೊಂಡ. ತನ್ನ ಆರಾಧ್ಯವನ್ನು ತನ್ನ ರೂಪದಲ್ಲಿಯೇ ಸರಳೀಕರಿಸಿಕೊಂಡು, ದೈವದ ಹೆಗ್ಗಳಿಕೆಯನ್ನು ಎತ್ತಿಹಿಡಿಯಲು ತನ್ನೆಲ್ಲವನ್ನೂ ಸಮರ್ಪಿಸಿಕೊಂಡ

ಎಂದಮೇಲೆ ಶೇಷಾಚಲದತ್ತ ಭೂಮಿಯ ಎಲ್ಲ ಕಡೆಯಿಂದಲೂ ಧಾವಿಸಿಬರುವ ತನ್ನ ಭಕ್ತ ವೃಂದವನ್ನು ಆಶೀರ್ವದಿಸಲು, ಸ್ವಾಮಿಪುಷ್ಕರಿಣೀತೀರದಲ್ಲಿ ನಿಂತ ಶ್ರೀಮನ್ನಾರಾಯಣನೇ ಆದ ಶ್ರೀ ವೆಂಕಟೇಶ್ವರಸ್ವಾಮಿ ತಾತಾನೆ ಹೊಸ ಕಿರೀಟದೊಂದಿಗೆ ಶೋಭಿಸುತ್ತಿರುವುದರಲ್ಲಿ ಆಶ್ಚರ್ಯವೇನಿಲ್ಲ.

ನಮ್ಮ-ನಿಮ್ಮ, ಸಪ್ತಗಿರಿ ಈ ಚಾರಿತ್ರಿಕ ಘಟನೆಯನ್ನು ಮುಖಪುಟದಲ್ಲಿ ದಾಖಲಿಸುವ ಪ್ರಯತ್ನದಲ್ಲಿ ತೊಡಗಿದ್ದು, ಇಂತಹ ಪವಿತ್ರ ಕಾರ್ಯದಲ್ಲಿ ಭಾಗಿಗಳಾಗಿ ಭಗವತ್ಕೃಪೆಗೆ ಪಾತ್ರರಾದವರನ್ನು ಅಭಿನಂದಿಸುತ್ತದೆ.



ಗೌರವ ಸಂಪಾದಕರು :
ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**



ಸಂಪುಟ ೧೬] ಫೆಬ್ರವರಿ ೧೯೮೬ [ಸಂಚಿಕೆ ೯

# ವಿಷಯಸೂಚಿ



ಮುಖಚಿತ್ರ ಹಾಗೂ ಹಿಂಬದಿಯಲ್ಲಿ: ಶ್ರೀ ವೆಂಕಟೇಶ್ವರಸ್ವಾಮಿಯ ನೂತನ ವಜ್ರ ಕಿರೀಟ ಹಾಗೂ ಚಿತ್ರ ಕಲ್ಪನೆ.

ಒಳಗಡೆ : ಜನವರಿಯಲ್ಲಿ ತಿರುಪತಿಯಲ್ಲಿ ನಡೆದ ನೇತ್ರ ಚಿಕಿತ್ಸಾ ಶಿಬಿರ ಹಾಗೂ ವಿಜಯವಾಡದಲ್ಲಿನ ಕಲ್ಯಾಣ ಮಂಟಪದ ಉದ್ಘಾಟನೆಯ ಚಿತ್ರಗಳು.

ಗಮನಿಕೆ : ಪುಟ 24 ರ ನಂತರ ನಾಲ್ಕು ಪುಟಗಳ ಸಂಖ್ಯೆ ಅನುಕ್ರಮವಾಗಿ 25, 26, 27, 28 ಎಂದಾಗ ಬೇಕು. ತಿದ್ದಿ ಓದಿಕೊಳ್ಳಬೇಕಾಗಿ ವಿನಂತಿ.

ಸಂದರ್ಶಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ

## ವಾರ್ಷಿಕ ತೆಪ್ಪೋತ್ಸವಗಳು

**21-3-86** ರಿಂದ **25-3-86** ವರೆಗೆ

| | | |
|---|---|---|
| 21–3–86 | ಶುಕ್ರವಾರ | ಶ್ರೀ ಕೋದಂಡರಾಮಸ್ವಾಮಿ ತೆಪ್ಪೋತ್ಸವ |
| 22–3–86 | ಶನಿವಾರ | ಶ್ರೀಕೃಷ್ಣಸ್ವಾಮಿ ತೆಪ್ಪೋತ್ಸವ |
| 23–3–86 | ಭಾನುವಾರ | ಶ್ರೀ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವ |
| 24–3–86 | ಸೋಮವಾರ | " " |
| 25–3–86 | ಮಂಗಳವಾರ | " " |

ತಿರುಮಲೆ ತಿರುಪತಿ ದೇವಸ್ಥಾನಗಳು.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ

**ಸಂದರ್ಶಿಸಿ ಆನಂದಿಸಿ**

# ಶ್ರೀ ಕೋದಂಡರಾಮಸ್ವಾಮಿ ದೇವಾಲಯ
# ತಿರುಪತಿ

## ವಾರ್ಷಿಕ ಬ್ರಹ್ಮೋತ್ಸವ

**ದಿನಾಂಕ 9-3-86 ರಿಂದ 18-3-86 ರ ವರೆಗೆ**

| | | |
|---|---|---|
| 9–3–86 | ಭಾನುವಾರ | ಅಂಕುರಾರ್ಪಣೆ |
| 14–3–86 | ಶುಕ್ರವಾರ | ಗರುಡವಾಹನ |
| 15–3–86 | ಶನಿವಾರ | ಹನುಮದ್ವಾಹನ |
| 17–3–86 | ಸೋಮವಾರ | ರಥೋತ್ಸವ |
| 18–3–86 | ಮಂಗಳವಾರ | ಅವಭೃತೋತ್ಸವ |

ಶ್ರೀ ಕೋದಂಡರಾಮಸ್ವಾಮಿದೇವಾಲಯ ತಿರುಪತಿಯ ಬಸ್, ರೇಲು ನಿಲ್ದಾಣಗಳ, ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯಲ್ಲೇ – ಹತ್ತು ನಿಮಿಷದ ಹಾದಿಯಲ್ಲಿದೆ. ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನವೂ ಬೆಳಗ್ಗೆ ಸಂಜೆಗಳಲ್ಲಿ ವಾಹನೋತ್ಸವಗಳೂ, ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳೂ ಇರುತ್ತವೆ.

ತಿರುಮಲೆ – ತಿರುಪತಿ ದೇವಸ್ಥಾನಗಳು.

**ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.**

# ಸಂಸ್ಕೃತದ ಭಕ್ತಿಗೀತೆಗಳು

ಸಂಸ್ಕೃತ ಗೀತ ಸಾಹಿತ್ಯದಲ್ಲಿ ಭಕ್ತಿಗೀತೆಗಳು ಬಹು ಪ್ರಧಾನ ಸ್ಥಾನವನ್ನು ಆಕ್ರಮಿಸಿವೆ. ಸಾಹಿತ್ಯದ ಇತರ ಶಾಖೆಗಳಿಗಿಂತ ಇದು ಬಹು ಜನಪ್ರಿಯವಾಗಿದೆ. ದೇಶದ ಧರ್ಮದೀಪವನ್ನು ಜಾಜ್ವಲ್ಯವಾಗಿ ಉಳಿಸುವುದಕ್ಕೆ ಇವೇ ಬಹು ಮಟ್ಟಿಗೆ ಕಾರಣ. ಭಾರತದ ವಿವಿಧ ಮತಗಳ ಆಧ್ಯಾತ್ಮಿಕ ಬೆಳವಣಿಗೆಗೆ ಇವೇ ಪ್ರಧಾನ ಪ್ರೇರಕ. ಐಹಿಕ ಪ್ರವೃತ್ತಿಗಳಿಂದ ಮಾನವನನ್ನು ತಿರುಗಿಸಿ ಆಧ್ಯಾತ್ಮದ ಕಡೆಗೆ ದೃಷ್ಟಿ ಇಡುವಂತೆ ಮಾಡುವುದು ಇವುಗಳ ಏಕೈಕಧ್ಯೇಯ. ಇವುಗಳೆಲ್ಲ ಪ್ರಾಯಶಃ ಸಾಮಾನ್ಯವಾಗಿ ಪಂಚಕ, ಅಷ್ಟಕ, ದಶಕ, ಪಂಚಾಶಿಕ, ಶತಕ ಮೊದಲಾದ ಸಂಖ್ಯಾತ್ಮಕ ನಿರ್ದೇಶಕಗಳಿಂದ ಕೂಡಿರುತ್ತದೆ. ಅನೇಕವು ಛಂದೋಮಯವಾಗಿದ್ದರೂ ಕೆಲವು ಸುಶ್ರಾವ್ಯವಾಗಿ ಹಾಡಲು ಯೋಗ್ಯವಾದ ದಂಡಕಗಳಾಗಿಯೂ ಇರುತ್ತವೆ. ಇವುಗಳ ಮೂಲವು ವೇದಕಾಲದಲ್ಲಿ ಪ್ರಾರಂಭವಾಗುತ್ತದೆ. ಇವುಗಳು ಅಸಂಖ್ಯೇಯ. ಅನೇಕವು ಅನಿರ್ದಿಷ್ಟ ಕರ್ತೃಕಗಳು.

ಸುಪ್ರಸಿದ್ಧವಾದ 'ಶ್ಯಾಮಲಾದಂಡಕ'ವನ್ನು ರಚಿಸಿದವನು ಕಾಳಿದಾಸನೆಂದು ಪ್ರತೀತಿ. 'ಬುದ್ಧಚರಿತ' ಮತ್ತು 'ಸೌಂದರಾನಂದ'ದ ಕರ್ತೃವಾದ ಅಶ್ವಘೋಷನು 'ಗಂಡೀಸ್ತೋತ್ರ' ಎಂಬ ಧರ್ಮ ಪ್ರಚಾರಾತ್ಮಕವಾದ ಗೀತವನ್ನು ರಚಿಸಿದ್ದಾನೆ. ಜೈನ ದಾರ್ಶನಿಕನಾದ ಸಿದ್ಧಸೇನ ದಿವಾಕರನು (ಕ್ರಿ. ಶ. ೫೦೦) 'ಕಲ್ಯಾಣಮಂದಿರ ಸ್ತೋತ್ರ'ವನ್ನು ತೀರ್ಥಂಕರ ಪ್ರಾರ್ಥನಾರೂಪವಾಗಿ ರಚಿಸಿದ್ದಾನೆ. ಬೌದ್ಧ 'ಸುಪ್ರಭಾತಸ್ತೋತ್ರ' ಮತ್ತು 'ಅಷ್ಟಮಹಾ ಶ್ರೀ ಚೈತ್ಯ' ಎಂಬುವುವು ಶ್ರೀಹರ್ಷಕೃತವೆಂದು ಊಹಿಸಲ್ಪಟ್ಟಿವೆ. ಬಾಣನು "ಚಂಡೀಶತಕ'ದ ಕರ್ತೃ. ಅವನ ಸಮಕಾಲೀನನಾದ ಮಾನತುಂಗನು 'ಭಕ್ತಾಮರ ಸ್ತೋತ್ರ'ವನ್ನು ಹಾಡಿದ್ದಾನೆ. ಬಾಣನ ಬಂಧುವೂ ಸಮಕಾಲೀನನೂ ಆಸ್ಥಾನಕವಿಯೂ ಆದ ಮಯೂರನು ಸೂರ್ಯಾಷ್ಟಕವನ್ನು ರಚಿಸಿ ಸೂರ್ಯನ ಅನುಗ್ರಹದಿಂದ ರೋಗ ವಿಮುಕ್ತನಾದನು. ಬೌದ್ಧನಾದ ಸರ್ವಜ್ಞಮಿತ್ರನು (ಕ್ರಿ. ಶ. ೭೫೦) 'ತಾರಾಸ್ತೋತ್ರ'ವನ್ನು ರಚಿಸಿರುವನು.

ಭಕ್ತಿಪಾರಮ್ಯ, ಶೈಲಿಯ ಸೌಷ್ಟವ ಮತ್ತು ಅರ್ಥಪೂರ್ಣತೆಗಳಿಂದ ಕೂಡಿದ ಅನೇಕ ಸ್ತೋತ್ರಗಳು ಶಂಕರಾಚಾರ್ಯರ ಕೃತವೆಂದು ಅಂಗೀಕೃತವಾಗಿವೆ. ಎಲ್ಲವೂ ಅವರಿಂದ ರಚಿತವಾಗದಿದ್ದರೂ ಸುಪ್ರಸಿದ್ಧವಾದ 'ಅನ್ನಪೂರ್ಣದಶಕ', 'ಕನಕಧಾರಾಸ್ತವ','ದಕ್ಷಿಣಾಮೂರ್ತಿಯಷ್ಟಕ','ರಾಮಭುಜಂಗ ಸ್ತೋತ್ರ', 'ಲಕ್ಷ್ಮೀನೃಸಿಂಹಸ್ತೋತ್ರ' 'ವಿಷ್ಣುಪಾದಾದಿ ಕೇಶಾಂತವರ್ಣನ', 'ಶಿವಭುಜಂಗ ಸ್ತೋತ್ರ', 'ಶಿವಾನಂದಲಹರೀ' ಮತ್ತು 'ಸೌಂದರ್ಯಲಹರೀ' ಅವರದೇ ಎಂದು ಹೇಳಬಹುದು.

ವೈಷ್ಣವ ಆಳ್ವಾರುಗಳಲ್ಲಿ ಒಬ್ಬರಾದ ಕುಲಶೇಖರರೊಡನೆ ಐಕ್ಯತೆಯನ್ನು ಹೇಳುವ ಕೇರಳದೇಶದ ಕುಲಶೇಖರ ರಚಿತ 'ಮುಕುಂದಮಾಲೆ'ಯು ಬಹುಸರಳವೂ ಭಕ್ತಿಪೂರ್ಣವೂ ಆದ ಭಕ್ತಿಗೀತೆ. ಆಳ್ವಾರ್‌ರವರ ಐಕ್ಯತೆಯ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಇದರ ಕಾಲ ಸುಮಾರು ಕ್ರಿ. ಶ. ೭೦೦ ಇರಬಹುದು. ಈ ಸ್ತೋತ್ರದ ಭಕ್ತಿ ಪ್ರಾಧಾನ್ಯವನ್ನು ಮುಂದಿನ ಶ್ಲೋಕದಿಂದ ಊಹಿಸಿಕೊಳ್ಳಬಹುದು.

ಜಿಹ್ವೇ ಕೀರ್ತಯ ಕೇಶವಂ  
ಮುರರಿಪುಂಚೇತೋ ಭಜ ಶ್ರೀಧರಂ  
ಪಾಣಿದ್ವಂದ್ವ ಸಮರ್ಚಯಾಚ್ಯುತ  
ಕಥಾಃಶ್ರೋತ್ರದ್ವಯ ತ್ವಂ ಶೃಣು  
ಕೃಷ್ಣಂ ಲೋಕಯ ಲೋಚನದ್ವಯ  
ಹರೇಃ ಗಚ್ಛಾಂಘ್ರಿ ಯುಗ್ಮಾಲಯಂ  
ಜಿಘ್ರ ಘ್ರಾಣ ಮುಕುಂದಪಾದ ತುಲಸೀಂ  
ಮೂರ್ಧ ನಮಾಧೋಕ್ಷಜಂ

ಡಾ॥ ಎನ್. ಅನಂತರಂಗಾಚಾರ್

ಮುಕುಂದ ಮಾಲೆಯಲ್ಲಿ ಇರುವುದು ೪೦ ಶ್ಲೋಕಗಳು ಮಾತ್ರ, ಆದರೂ ಅದರ ಸರಳತೆಯೂ, ಭಾವ ಶ್ರೇಷ್ಠತೆಯೂ ಪರಮ ಶ್ಲಾಘ್ಯವಾದುದು. ಅದರ ಕೊನೆಯ ಶ್ಲೋಕವಾದ

ಕ್ಷೀರಸಾಗರ ತರಂಗಶೀಕರಾಸಾರ  
ತಾರಕಿತ ಚಾರುಮೂರ್ತಯೇ ।  
ಭೋಗಿ ಭೋಗಶಯನೀಯಶಾಯಿನೇ  
ಮಾಧವಾಯ ಮಧುವಿದ್ವಿಷೇ ನಮಃ ॥

ಎಂಬುದು ಬಹಳ ಹೃದಯಂಗಮವಾಗಿದೆ.

ಕಂಚಿಯ ಮೂಕನೆಂಬುವನು ಕಾಮಾಕ್ಷಿಯ ಕೃಪೆಯಿಂದ ವಾಕ್ಕನ್ನು ಪಡೆದು ಅದರ ಸಾರ್ಥಕ್ಯತೆಗಾಗಿ ಅದೇ ದೇವತೆಯನ್ನು ಕುರಿತು 'ಮೂಕ ಪಂಚಾಶಿಕಾ' ಎಂಬ ಸ್ತೋತ್ರವನ್ನು ರಚಿಸಿದ್ದಾನೆ. ಇದರ ಕಾಲ ಸುಮಾರು ೮೦೦ ಇರಬಹುದು. ಕಾಶ್ಮೀರದ ದೊರೆಯಾದ ಪುಷ್ಪದಂತನು (ಕ್ರಿ.ಶ. ೮೫೦) ಶಿವನನ್ನು ತನ್ನ 'ಮಹಿಮ್ನಾ' ಸ್ತೋತ್ರದಲ್ಲಿ ಪ್ರಾರ್ಥಿಸಿದ ಕಾಲದಲ್ಲಿಯೇ 'ಹರಿವಿಜಯ'ದ ಕರ್ತೃವಾದ ರತ್ನಾಕರನು ಅದೇ ಶಿವನನ್ನು ತನ್ನ 'ವಕ್ರೋಕ್ತಿ ಪಂಚಾಶಿಕಾ' ಎಂಬ ಬಹುಭಾವ-ವೈವಿಧ್ಯದಿಂದ ಕೂಡಿದ ಸ್ತೋತ್ರವನ್ನು ರಚಿಸಿದನು. ಕವಿಯ ಕೌಶಲ್ಯವು ಪ್ರತಿ ಪದ್ಯದಲ್ಲಿಯೂ ಪ್ರಕಾಶಿತವಾಗಿದೆ. ಕಾಶ್ಮೀರದ ಅವಂತೀವರ್ಮನ ಆಶ್ರಿತನೂ ಶ್ರೇಷ್ಠ ಲಾಕ್ಷಣಿಕನೂ ಆದ ಆನಂದವರ್ಧನನು (ಕ್ರಿ. ಶ. ೮೦೦) ಪಾರ್ವತೀಸ್ತೋತ್ರರೂಪವಾದ ಶಬ್ದಾಲಂಕಾರಭೂಯಿಷ್ಟವಾದ ಬಹುಮಾರ್ದವ ಶೈಲಿಯಿಂದ ಕೂಡಿದ 'ದೇವೀಶತಕ'ವನ್ನು ರಚಿಸಿದ್ದಾನೆ. ಅಭಿನವಗುಪ್ತನ ಗುರುವಾದ ಉತ್ಪಲದೇವನಿಂದ ರಚಿತವಾದುದು ಶಿವಪರವಾದ 'ಸ್ತೋತ್ರಾವಳಿ' ಎಂಬ ಗೀತ ಸಂಗ್ರಹ.

ವಿಶಿಷ್ಟಾದ್ವೈತ ಸಂಪ್ರದಾಯದ ಪರಮಾಚರ್ಯರಾದ ಯಾಮುನಾಚಾರ್ಯರಿಂದ 'ಚತುಶ್ಲೋಕಿ' ಮತ್ತು 'ಸ್ತೋತ್ರರತ್ನ'ಗಳೆಂಬ ಅದ್ಭುತ ಗೀತೆಗಳು ರಚಿತವಾಗಿವೆ. ಇದರ ಹೆಸರು ವಾಸ್ತವ

ವಾಗಿ ಅನ್ವರ್ಥವಾಗಿದೆ. ಅದರ ಮುಂದಿನ ಎರಡು ಶ್ಲೋಕಗಳು ಮಹಾವಿಶ್ವಾಸವನ್ನು ಪ್ರದರ್ಶಿಸ ತಕ್ಕದ್ದಾಗಿದೆ.

ತವಾಮೃತಸ್ಯಂದಿನಿ ಪಾದಪಂಕಜೇ
ನಿವೇಶಿತಾತ್ಮಾ ಕಥ ಮನ್ಯ ದಿಚ್ಛತಿ ॥
ಸಿತೇಽರವಿಂದೇ ಮಕರಂದ ನಿರ್ಭರೇ
ಮಧುವ್ರತೋ ನೇಕ್ಷುರಸಂ ಹಿ ವೀಕ್ಷತೇ ॥
ನಿರಾಸಕಸ್ಯಾಪಿ ನ ತಾವದುತ್ಸಹೇ
ಮಹೇಶಹೇತುಂ ತವ ಪಾದ ಪಂಕಜಂ ॥
ರುಷಾ ನಿರಸ್ತೋಽಪಿ ಶಿಶು ಸ್ತನಂಧಯಃ ।
ನ ಮಾತು ಶ್ಚರಣೌ ಜಿಹಾಸತಿ ॥

'ಶರಣಾಗತಿಗದ್ಯ', 'ವೈಕುಂಠ ಗದ್ಯ', 'ಶ್ರೀರಂಗ ಗದ್ಯ'ಗಳೆಂಬ ಗದ್ಯತ್ರಯವು ರಾಮಾನುಜಾಚಾರ್ಯರಿಂದ (ಕ್ರಿ. ಶ. ೧೦೧೭-೧೧೩೭) ಅನುಗ್ರಹೀತವಾದುದು. ಶರಣಾಗತಿ ಗದ್ಯದಲ್ಲಿ ಬರುವ ಮುಂದಿನ ಶ್ರೀ ಲಕ್ಷ್ಮೀ ವಿಷಯಕವಾದ ಗದ್ಯದಲ್ಲಿ ಪ್ರಪತ್ತಿ ಸ್ವರೂಪವು ಬಹು ಹೃದಯಂಗಮವಾಗಿ ವರ್ಣಿತವಾಗಿದೆ.

ಭಗವನ್ನಾರಾಯಣಾಭಿಮತಾನುರೂಪ ಸ್ವರೂಪ ರೂಪ ಗುಣವಿಭವೈಶ್ವರ್ಯ ಶೀಲಾದ್ಯ ನವಧಿಕಾತಿಶಯ ಅಸಂಖ್ಯೇಯ ಕಲ್ಯಾಣ ಗುಣಗಣಾಂ ಪದ್ಮವನಾಲಯಾಂ ಭಗವತೀಂ ಶ್ರಿಯಂದೇವೀಂ ನಿತ್ಯಾನಪಾಯಿನೀಂ ನಿರವದ್ಯಾಂ ದೇವ ದೇವ-ದಿವ್ಯ-ಮಹಿಷೀಂ ಅಖಿಲ ಜಗನ್ಮಾತರಂ ಅಸ್ಮನ್ಮಾತರಂ ಅಶರಣ್ಯಶರಣ್ಯಾಂ ಅನನ್ಯಶರಣಃ ಶರಣ ಮಹಂ ಪ್ರಪದ್ಯೇ

ರಾಮಾನುಜಾಚಾರ್ಯರ ಸುಪ್ರಸಿದ್ಧ ಶಿಷ್ಯರಾದ ಶ್ರೀವತ್ಸಾಂಕರಿಂದ 'ಪಂಚಸ್ತವ'ವೆಂದು ಪ್ರಸಿದ್ಧವಾಗಿರುವ ಶ್ರೀಸ್ತವ, ಅತಿಮಾನುಷಸ್ತವ, ವರದರಾಜಸ್ತವ, ಸುಂದರಬಾಹುಸ್ತವ ಮತ್ತು ವೈಕುಂಠಸ್ತವಗಳು ಉಕ್ತವಾದವು. ಇವುಗಳಲ್ಲಿ ಸ್ತೋತ್ರಕಾರರ ಅದ್ಭುತವಾದ ಮೇಧಾಶಕ್ತಿಯೂ ಭಾವವೈಶದ್ಯವೂ ಪ್ರಕಟವಾಗಿವೆ. ಇಷ್ಟೇ ಮೇಲ್ಮಟ್ಟಕ್ಕೆ ಸೇರಿದುದು ಶ್ರೀವತ್ಸಾಂಕರ ಪುತ್ರರಾದ ಪರಾಶರಭಟ್ಟರ 'ಶ್ರೀಗುಣರತ್ನಕೋಶ' ಮತ್ತು 'ಶ್ರೀರಂಗರಾಜಸ್ತವ'.

ಭಕ್ತಿ ಸಾಹಿತ್ಯದಲ್ಲಿ ಪರಮೋತ್ತಮ ಸ್ಥಾನವನ್ನು ಪಡೆದಿರುವವನು ಬಂಗಾಳದ ಲಕ್ಷ್ಮಣಸೇನನ ಆಸ್ಥಾನಕವಿ ಜಯದೇವ. ಈತನು ಕಾಶ್ಮೀರದಿಂದ ಕೇರಳದವರೆಗೂ ಅಸ್ಸಾಮಿನಿಂದ ಗುಜರಾತಿನವರೆಗೂ ಎಲ್ಲ ಕವಿಗಳ ಸಾಹಿತಿಗಳ ಗಾಯಕರ, ನಟರ, ಭಕ್ತರ, ಭಾಗವತರ, ಕಲಾಭಿಜ್ಞರ ಪರಮ ಪ್ರೀತಿಗೆ ಪಾತ್ರನಾಗಿದ್ದಾನೆ. ಈತನ ಅದ್ಭುತ ಭಕ್ತಿಗೀತೆ 'ಗೀತಗೋವಿಂದ'. ಈತನ ತಂದೆ ಭೋಜದೇವ, ತಾಯಿ ರಮಾದೇವಿ. ಪರಾಶರರೇ ಮುಂತಾದವರು ಸ್ನೇಹಿತರು. ಹೆಂಡತಿ ಪದ್ಮಾವತಿ. ಲಕ್ಷ್ಮಣ ಸೇನನ ಆಸ್ಥಾನ ಕವಿಗಳಾದ ಗೋವರ್ಧನ, ಶರಣ, ಜಯದೇವ, ಉಮಾಪತಿ, ಕವಿರಾಜರೆಂಬ ಐದು ಪಂಡಿತರತ್ನಗಳಲ್ಲಿ ಉತ್ತಮನಾದವನು ಜಯದೇವ. ಈತನ ಗೀತಗೋವಿಂದ ೧೨ ಸರ್ಗಗಳಾಗಿವೆ. ಇವನು ಒರಿಸ್ಸ ದೇಶದ ಕಿಂದುಬಿಲ್ವ ಎಂಬ ಸ್ಥಳದಲ್ಲಿ ಜನಿಸಿದನು. ಪ್ರತಿಯೊಂದು ಸರ್ಗವೂ ನಾಯಕನ ಬಹು ಸುಂದರವಾದ ನಾಮಗಳಿಂದ ನಿರ್ದೇಶಿತವಾಗಿದೆ. ಅಕ್ಲೇಶಕೇಶವ, ಮುಗ್ಧ ಮಧುಸೂದನ, ನಾಗರನಾರಾಯಣ, ಸಾನಂದದಾಮೋದರ ಮುಂತಾದುವು ಅವುಗಳಲ್ಲಿ ಕೆಲವು. ಕೃಷ್ಣ, ರಾಧಾ ಮತ್ತು ಗೋಪಿಯರ ಸಂಭಾಷಣಾರೂಪದಲ್ಲಿ ರಾಧಾಕೃಷ್ಣರ ಪ್ರಣಯ ನಿರೂಪಣೆ ಇದರ ವಸ್ತು. ಕೆಲವು ಕಡೆಗಳಲ್ಲಿ ಆತ್ಮಗೀತೆಯಾಗಿಯೂ ಪರಿಣಮಿಸುತ್ತದೆ. ಇದು ಅಷ್ಟಪದಿಯ ರೂಪ ರೂಪದಲ್ಲಿದೆ. ಪ್ರತಿಯೊಂದಕ್ಕೂ ರಾಗ ಸೂಚಿತವಾಗಿದೆ. ಇದರ ಮೊದಲ ಹತ್ತು ಸರ್ಗಗಳಲ್ಲಿ ರಾಧಾಮಾಧವರ ವಿಪ್ರಲಂಭ ಶೃಂಗಾರವು ಕೊನೆಯ ಎರಡು ಸರ್ಗಗಳಲ್ಲಿ ಸಂಭೋಗ ಶೃಂಗಾರವೂ ವರ್ಣಿತವಾಗಿವೆ. ಇಲ್ಲಿಯ ಸರಳ ಪದ ಸಂಯೋಜನ, ರಸಸ್ಯಂದಿಯಾದ ಮಧುರ ಭಾವಗಳ ಸುಂದರ ನಿರೂಪಣೆ ಚಿತ್ತಾಕರ್ಷಕವಾದ ಮನಮೋಹಕ ವರ್ಣನೆ, ಶಬ್ದಾರ್ಥಗಳ ಸುರಮ್ಯ ಮಾಧುರ್ಯ, ಸಂಗೀತ ಸಾಹಿತ್ಯಗಳ ಸಾಮರಸ್ಯ –ಇವು ಎಂತಹ ವಾಚಕನನ್ನಾದರೂ ಮುಗ್ಧಗೊಳಿಸುತ್ತವೆ. ಸಂಭಾಷಣೆ, ಕಥಾನಿರೂಪಣೆ, ಭಾವಾನುಭವ ಮೊದಲಾದುವು ಬಹು ಕೌಶಲ್ಯದಿಂದ ಮಿಶ್ರಿತವಾಗಿದೆ. ಇದನ್ನು ಶುದ್ಧನಾಟಕ ಮತ್ತು ಶುದ್ಧಗೀತೆಯ ಮಧ್ಯವರ್ತಿಯೆಂದು ಹೇಳಬಹುದು. ಪ್ರಣಯದ ಎಲ್ಲ ಮುಖಗಳೂ ಇಲ್ಲಿ ವರ್ಣಿತವಾಗಿವೆ.

ಇಷ್ಟಾದರೂ ಅದರ ಮೇಲ್ಮೆಯೂ ಪೂಜ್ಯತೆಯೂ ಉಂಟಾಗಿರುವುದು ಅದರಲ್ಲಿ ದ್ಯೋತಿತವಾಗಿರುವ ಅಧ್ಯಾತ್ಮ ಭಾವನೆಯಿಂದ, ಜಯದೇವನು ಪರಮಭಕ್ತ. ಕವಿಯು ತನ್ನನ್ನು ಹರಿಚರಣ–ಶರಣ, ಕೃಷ್ಣತಾದಾತ್ಮ್ಯ, ಮಧುರ ಭಾವಾನುಭವ, ಕೃತಹರದೇವ, ಹರಿಪ್ರವೀರ ಎಂದು ಸಂಬೋಧನೆ ಮಾಡಿಕೊಂಡಿದ್ದಾನೆ. ತನ್ನ ಗ್ರಂಥದಲ್ಲಿ ರಾಸಕ್ರೀಡೆಗಳ ಮೂಲಕ ಪೂರ್ಣವಾದ ಆಧ್ಯಾತ್ಮಿಕ ಅರ್ಥವನ್ನು ಪ್ರತಿಪಾದಿಸಿದ್ದಾನೆ. ಉಪಾಸನಾಮಾರ್ಗದಲ್ಲಿ ಮಧುರ ಭಾವವೂ ಒಂದು. ಸಾಧಕನು ತನ್ನನ್ನು ನಾಯಿಕಾಸ್ಥಾನದಲ್ಲಿಟ್ಟುಕೊಂಡು ಭಗವಂತನನ್ನು ಪ್ರಿಯನೆಂದು ಭಾವಿಸಿ ಸಾಧನೆಯನ್ನು ಮುಂದುವರಿಸುತ್ತಾನೆ. ಈ ವಿಧವಾದ ನಾಯಿಕಾನಾಯಕ ಭಾವನೆ ಶೈವ ವೈಷ್ಣವ ಮೊದಲಾದ ಅನೇಕ ಪಂಥಗಳಲ್ಲುಂಟು. ಆ ಭಾವವನ್ನೇ ಕವಿಯು ಇಲ್ಲಿ ಅಡಗಿಸಿರುವುದು.

ಇಲ್ಲಿಯ ರಾಧಾಮಾಧವರ ಪ್ರೇಮ ಅಲೌಕಿಕವೂ ಅದುದು. ಈ ಮಿಳನ ಜೀವಾತ್ಮ ಪರಮಾತ್ಮರ ಮಿಳನದ ಪ್ರತೀಕ. ರಾಧೆ ಜೀವ ಸ್ಥಾನೀಯಳು,ಮಾಧವ ಪರಮಾತ್ಮಸ್ಥಾನೀಯನು. ಸಖಿ ಆಚಾರ್ಯಸ್ಥಾನೀಯಳು. ರಾಧೆಗೆ ಮಾಧವನನ್ನು ಸೇರುವುದು ಪರಮಾರ್ಥವಾದಂತೆ-ಜೀವಿಗೆ ಪರಮಾತ್ಮಯೋಗವೇ ಪುರುಷಾರ್ಥ. ಮಾಧವನು ಬಂದು ರಾಧೆಯನ್ನು ಸಾಂತ್ವನಗೊಳಿಸುವಂತೆ ಪರಮಾತ್ಮನು ನಮ್ಮ ಉದ್ಧಾರಕ್ಕಾಗಿ ಹಾತೊರೆದು ಇಲ್ಲಿಯ ಸಖಿಯಂತೆ ಆಚಾರ್ಯರ ಸದುಪದೇಶದಿಂದ ನಮ್ಮ ರಕ್ಷಣೆಗೆ ಸಹಾಯಮಾಗುವನು. ಇದು ಇಲ್ಲಿಯ ಅಂತರಾರ್ಥವೆಂದು ಪಂಡಿತಪ್ರಕಾಂಡರೆಲ್ಲ ಭಾವಿಸಿದ್ದಾರೆ. ಈ ಮಧುರ ಭಾವನೆ ಅಧರ್ಮವಾದುದೇನೂ ಅಲ್ಲ. ಇದನ್ನೇ ಜಯದೇವನಿಗಿಂತ ಹಿಂದೆ ಶೈವನಾಯನಾರ್ ಮತ್ತು ವೈಷ್ಣವ ಆಳ್ವಾರುಗಳೂ ಮುಂದೆ ಬಂದ ಮೀರಾಬಾಯಿ ಮೊದಲಾದ ವೈಷ್ಣವ ಸಂತರೂ ಅನುಷ್ಠಿಸಿ ತಮ್ಮ ಸಾಧನೆಗಳಲ್ಲಿ ಕೃತಕೃತ್ಯರಾಗಿದ್ದಾರೆ. ಜಯದೇವನಿಗೂ ಇದೇ ಭಾವನೆ ವಿಶೇಷವಾಗಿದ್ದಂತೆ ತೋರುತ್ತದೆ. ಕವಿಯೂ ಅವನ ಸಹಧರ್ಮಿಣಿಯೂ ಪ್ರತಿದಿನವೂ ಇಂತಹ ಭಾವನೆಯಿಂದಲೇ ಚರಣಚಾರಣರಾಗಿ ಆನಂದ ಸಾಮ್ರಾಜ್ಯವನ್ನು ಪಡೆದರೆಂದು ಕಾಣುತ್ತದೆ.

ಈ ಕಾವ್ಯವನ್ನು ಕೃಷ್ಣಚರಿತೆಯೆಂಬ ಒಂದು ಅಲೌಕಿಕ ಭಾವನೆಯಿಂದ ಅನುಸಂಧಾನ ಮಾಡಿದರೆ ಪ್ರಪಂಚದ ಎಲ್ಲ ಮಧುರ ಪದಾರ್ಥಗಳು ನಿಸ್ಸಾರವಾಗುವುದೆಂಬ ಭಾವದಿಂದ ಕೂಡಿದ ಮುಂದಿನ ಶ್ಲೋಕದಿಂದ ಕವಿಯು ತನ್ನ ಕಾವ್ಯವನ್ನು ಪರಿಸಮಾಪ್ತಿಗೊಳಿಸುವನು.

ಸಾಧ್ವೀ ಮಾಧ್ವೀಕ ಚಿಂತಾ ನ ಭವತಿ
ಭವತಃ ಶರ್ಕರೇ ಕರ್ಕಶಾಸಿ
ದ್ರಾಕ್ಷೇ ದ್ರಕ್ಷ್ಯಂತಿ ಕೇ ತ್ವಾಮಮೃತ
ಮೃತಮಸಿ ಕ್ಷೀರನೀರಂ ರಹಸ್ತೇ
ಮಾಕಂದಾಕ್ರಂದ ಕಾಂತಾಧರ
ನ ತುಲಾಂ ಗಂತು ಮಿಚ್ಛಂತಿ ಭಾವಂ
ಯಾವತ್ ಶೃಂಗಾರಸಾರಂ ಶುಭಮ್
ಇವ ಜಯದೇವಸ್ಯ ವೈಧಗ್ಧ್ಯವಾಣೀ

(ಶ್ರೀ ಜಯದೇವನು ಹೇಳಿದ ಶೃಂಗಾರಸಾರವು ಶುಭಕರ ಅದ ಜಗನ್ಮಂಗಳಕರವಾದ ಶ್ರೀ

ಕೃಷ್ಣನ ಚರಿತ್ರೆಯ ವರ್ಣನೆಯು ಎಲ್ಲಿಯವರೆಗೆ ಎಲ್ಲರಿಗೂ ಭಾವಪೋಷಣೆಯನ್ನು ಮಾಡುತ್ತಿರುವುದೋ ಅಲ್ಲಿಯವರೆಗೆ ಎಲೈ ಜೇನುತುಪ್ಪವೇ ಜಯದೇವನ ವಾಣಿಗೆ ಸವಿಯಲ್ಲಿ ನೀನು ಸಮವೆಂಬ ಚಿಂತೆ ನಿನಗೆ ಸಾಧುವಾದುದಲ್ಲ; ಸಕ್ಕರೆಯೇ ನೀನು ಕರ್ಕಶಿ, ದ್ರಾಕ್ಷಿಯೇ ನಿನ್ನನ್ನು ಯಾರು ನೋಡುತ್ತಾರೆ? ಅಮೃತವೇ ನೀನು ಹೆಸರಿನಿಂದ ಗರ್ವಿಸಬೇಡ,ನೀನು ಮೃತನಾದಂತೆಯೇ. ಕ್ಷೀರವೇ ನಿನ್ನರಸ ನೀರಾದುದು. ಮಾವಿನಹಣ್ಣೇ ಕ್ರಂದಿಸು ಹೋಗು, ಎಲೈ ಕಾಂತಾಧರವೇ! ನೀನೂ ಸಹ ನಿನ್ನನ್ನು ಇದರೊಡನೆ ಹೋಲಿಸಿಕೊಳ್ಳುವ ಗೋಜಿಗೆ ಹೋಗಬೇಡ– (ಅಂದರೆ ಇವಾವುವೂ ಜಯದೇವನ ವಾಣಿಗೆ ಸಮವಾದುದು ಅಲ್ಲ ಎಂದರ್ಥ) ಈ ಜಯದೇವನೇ'ಗಂಗಾಸ್ತವ'ವೆಂಬ ಮತ್ತೊಂದು ಸ್ತೋತ್ರವನ್ನು ರಚಿಸಿದ್ದಾನೆ.

ಇದೇ ಮಾದರಿಯದು 'ಶ್ರೀ ಚಿಹ್ನಕಾವ್ಯ'ದ ಕರ್ತೃವಾದ ಕೃಷ್ಣಲೀಲಾಶುಕ ರಚಿತವಾದ 'ಶ್ರೀ ಕೃಷ್ಣಕರ್ಣಾಮೃತ'.ಇದರಲ್ಲಿ ೩೧೦ ಶ್ಲೋಕಗಳಿವೆ. ಶ್ರೀಕೃಷ್ಣನ ಬಾಲಲೀಲೆಗಳು ಬಹು ಮನೋಹರವಾಗಿ ಚಿತ್ರಿತವಾಗಿವೆ. ಇದರಲ್ಲಿ ಗೀತಗೋವಿಂದದಷ್ಟು ಶೃಂಗಾರ ಪ್ರಾಧಾನ್ಯವಿಲ್ಲದಿದ್ದರೂ ಇದು ದೇಶದಾದ್ಯಂತ ಬಹು ಜನಪ್ರಿಯವಾಗಿದೆ. ಇವನ ವಿಷಯವಾಗಿ ಹೆಚ್ಚಾಗಿ ಏನೂ ತಿಳಿದಿಲ್ಲ. ಲೀಲಾಶುಕ ಎಂಬುವುದು ಅವನ ಕಾವ್ಯನಾಮವಿರಬೇಕು. ಕವಿಗೆ ಸೋಮಗಿರಿಯೆಂಬುವನು ಗುರು, ಶಿಖಿಪಿಂಛಮೌಳಿ ಎಂಬುವನು ಶಿಕ್ಷಾಗುರು. ಇವನು ಶೈವನಿರಬೇಕು. ಆಂಧ್ರದೇಶದ ನಿವಾಸಿಯಿರಬೇಕು.

ಈ ಕಾವ್ಯದ ಶ್ಲೋಕಗಳೆಲ್ಲ ಪ್ರಾಯಶಃ ಧ್ಯಾನ ಶ್ಲೋಕಗಳು ಅಂದರೆ ಒಂದೊಂದೂ ಸ್ವಸಂಪೂರ್ಣ. ಅವುಗಳ ಅರ್ಥ ತಿಳಿಯುವುದಕ್ಕೆ ಹಿಂದಿನ ಮುಂದಿನ ಶ್ಲೋಕಗಳ ಸಂಗತಿ ತಿಳಿಯಬೇಕಾದ್ದಿಲ್ಲ. ಇವನ ೩೧೦ ಶ್ಲೋಗಳಲ್ಲಿಯೂ ಕೃಷ್ಣನ ವಿವಿಧ ಮೂರ್ತಿಗಳನ್ನು ಕಾಣಬಹುದು. ಕೃತಿಯಲ್ಲಿ ಬರುವ ಕೃಷ್ಣನ ಮೂರ್ತಿ ಹಲವು ಸಂದರ್ಭದವು. ಅಂಬೆಗಾಲಿಡುವ ಕೃಷ್ಣ, ಬೆಣ್ಣೆಯನ್ನು ಹಿಡಿದಿರುವ ಕೃಷ್ಣ, ಹಾಲುಬೇಡುವ ಕೃಷ್ಣ, ಬೆಣ್ಣೆಕೊಡುವ ಕೃಷ್ಣ, ದನಕಾಯಲು ಹೋಗುವ ಕೃಷ್ಣ, ಗೊಲ್ಲ ಚೆಲ್ವೆಯರೊಡನೆ ಆಟವಾಡುವ ಕೃಷ್ಣ ಮೊದಲಾದ ಅನೇಕ ಕೃಷ್ಣನನ್ನು ಕುರಿತ ಕಥೆಗಳ ಮಾಲೆಯದು.

ಕವಿ ಕಥನ ಚತುರ. ಅವನ ಕಾವ್ಯವೂ ಚಾತುರ್ಯದಿಂದಲೇ ಕೂಡಿದೆ. ಭಾಷೆಯು ಸುಂದರವೂ ಸರಳವೂ ಆಗಿದೆ. ಇದರಲ್ಲಿ ಪ್ರಾಸಾನುಪ್ರಾಸಗಳ ಸೊಗಸಿದೆ, ಸ್ವರಗಳ ವಿನ್ಯಾಸವಿದೆ. ರಚನೆ ಚಮತ್ಕಾರವಿದೆ. ಅಲಂಕಾರವಿದೆ, ವ್ಯಂಗ್ಯವಿದೆ, ಶೃಂಗಾರ ವೀರ ಕರುಣ ಹಾಸ್ಯ ರಸಗಳು ಅಲ್ಲಲ್ಲೇ ಬಹು ಸೊಗಸಾಗಿವೆ.

ಇದರಲ್ಲಿ ಕುಲಶೇಖರರ "ಹೇ ಗೋಪಾಲಕ ಹೇ ಕೃಪಾಜಲನಿಧೇ" ಎಂಬ ಶ್ಲೋಕವು ಅನುವಾದವಾಗಿದೆ. ಕವಿಯು ಇದನ್ನು ಅಲ್ಲಿಂದ ಆರಿಸಿಕೊಂಡಿರಬೇಕು. ಬಹುಜನಪರಿಚಿತವಾದ ಮತ್ತು ಸುಂದರವಾದ ಈಗ ಎಲ್ಲರಲ್ಲಿಯೂ ಬಳಕೆಯಲ್ಲಿರುವ ಮುಂದಿನ ಮೂರುಶ್ಲೋಕಗಳು ಈ ಕಾವ್ಯದ ಭಾಗವಾಗಿವೆ.

ಕಸ್ತೂರೀ ತಿಲಕಂ ಲಲಾಟಫಲಕೇ
ವಕ್ಷಃಸ್ಥಲೇ ಕೌಸ್ತುಭಂ
ನಾಸಾಗ್ರೇ ನವಮೌಕ್ತಿಕಂ
ಕರತಲೇ ವೇಣುಂ ಕರೇ ಕಂಕಣಂ।
ಸರ್ವಾಂಗೇ ಹರಿಚಂದನಂ ಚ ಕಲಯನ್
ಕಂಠೇ ಚ ಮುಕ್ತಾವಳೀ
ಗೋಪಸ್ತ್ರೀ ಪರಿವೇಷ್ಟಿತೋ ವಿಜಯತೇ
ಗೋಪಾಲ ಚೂಡಾಮಣಿಃ॥

ಕರಾರವಿಂದೇನ ಪದಾರವಿಂದಂ
ಮುಖಾರವಿಂದೇ ವಿನಿವೇಶಯಂತಂ
ವಟಸ್ಯ ಪತ್ರಸ್ಯ ಪುಟೇ ಶಯಾನಂ
ಬಾಲಂ ಮುಕುಂದಂ ಮನಸಾ ಸ್ಮರಾಮಿ॥

ಸಾಯಂಕಾಲೇ ವನಾಂತೇ ಕುಸುಮಿತ
ಸಮಯೇ ಸೈಕತೇ ಚಂದ್ರಿಕಾಯಾಂ
ತ್ರೈಲೋಕ್ಯಾಕರ್ಷಣಾಂಗಂ ಸುರನರ
ಗಣಿಕಾ ಮೋಹನಾಪಾಂಗಮೂರ್ತಿಂ॥
ಸೇವ್ಯಂ ಶೃಂಗಾರ ಭಾವೈಃ
ನವರಸಭರಿತೈಃ ಗೋಪಕನ್ಯಾ ಸಹಸ್ರೈಃ
ವಂದೇಽಹಂ ರಾಸಕೇಳೀ ರತಮ್
ಅತಿಸುಭಗಂ ಪಶ್ಯ ಗೋಪಾಲಕೃಷ್ಣಂ॥

ಶ್ರೀಕೃಷ್ಣ ಕರ್ಣಾಮೃತವು ಕವಿಯ ಕಾಲಕ್ಕೆ ಬಹು ಪ್ರಸಿದ್ಧವಾಗಿದ್ದಿರಬೇಕು. ಸುಮಾರು ೧೩ನೆಯ ಶತಮಾನದಲ್ಲಿದ್ದ ಕನ್ನಡ ಕವಿಯಾದ ರುದ್ರಭಟ್ಟನು ಇದರಿಂದ ಕೆಲವು ಶ್ಲೋಕಗಳನ್ನು ಪರಿವರ್ತಿಸಿ ತನ್ನ ಕಾವ್ಯವಾದ 'ಜಗನ್ನಾಥ ವಿಜಯ'ದಲ್ಲಿ ಉಪಯೋಗಿಸಿದ್ದಾನೆ. ಸುಮಾರು ೧೩ನೆಯ ಶತಮಾನಕ್ಕೆ ಸೇರಿದ ಶ್ರೀ ಮಧ್ವಾಚಾರ್ಯಕೃತ 'ದ್ವಾದಶಸ್ತೋತ್ರ'ವು ಭಕ್ತಿಗೀತೆಗಳಲ್ಲಿ ಬಹು ಯೋಗ್ಯಸ್ಥಾನವನ್ನು ಪಡೆದಿದೆ.

ಕವಿತಾರ್ಕಿಕಸಿಂಹರೆಂದು ಪ್ರಸಿದ್ಧರಾಗಿರುವ ವೇದಾಂತದೇಶಿಕರು ಸ್ತೋತ್ರಗೀತೆಗಳನ್ನು ರಚಿಸಿರುವವರಲ್ಲಿ ಪ್ರಖ್ಯಾತರು. ಇವರು ಕಂಚಿಯವರು. ಅನಂತಸೂರಿ ತೋತಾರಮ್ಮ ಎಂಬುವರು ಇವರ ತಂದೆತಾಯಿಗಳು. ಇವರ ಕಾಲ ೧೨೬೮ ರಿಂದ ೧೩೭೦. ತಿರುಪತಿಯ ಶ್ರೀನಿವಾಸ, ಕಂಚಿಯ ವರದರಾಜ, ಶ್ರೀರಂಗದ ರಂಗನಾಥ ಇವರುಗಳು ಆರಾಧ್ಯ ದೈವಗಳು. ಇವರು ೨೮ ಸ್ತೋತ್ರಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಶ್ರೀರಾಮನ ಪಾದುಕಾ ವಿಷಯಕವಾದ ೧೦೦೦ ಶ್ಲೋಕಗಳನ್ನುಳ್ಳ ಪಾದುಕಾಸಹಸ್ರವು ಒಂದೇ ರಾತ್ರಿಯಲ್ಲಿ ಅವರ ಪ್ರತಿ ಕಕ್ಷಿಯನ್ನು ಗೆಲ್ಲುವುದಕ್ಕಾಗಿ ರಚಿತವಾದುದೆಂದು ಪ್ರತೀತಿ. ಕವಿಯ ಭಾವನಾತರಂಗಗಳ ಉತ್ತಮ ಪ್ರತೀಕ ಇದು. ಅವರ ಉಪಾಸ್ಯ ದೈವವಾದ ಗರುಡನ ಸ್ತೋತ್ರರೂಪವಾದುದು 'ಗರುಡದಂಡಕ'. ರಾಮಾಯಣದ ಉತ್ತಮ ಸಂಕ್ಷಿಪ್ತ ಸಂಗ್ರಹ 'ರಘುವೀರಗದ್ಯ'. ಅದರ ಮೇಲ್ಮೆಯನ್ನು ಕುರಿತು ಅವರೇ ಗ್ರಂಥಾಂತ್ಯದಲ್ಲಿ ಹೀಗೆಂದು ವರ್ಣಿಸಿದ್ದಾರೆ.

ಕವಿಕಥಕ ಸಿಂಹ ಕಥಿತಂ
ಕಠೋರ ಸುಕುಮಾರ ಗುಂಭ ಗಭೀರಂ
ಭವ ಭಯ ಭೇಷಜ ಮೇತತ್
ಪಠತಮಹಾವೀರ ವೈಭವಂ ಸಹೃದಯಾಃ

ತಿರುಪತಿಯ ಶ್ರೀನಿವಾಸನನ್ನು ಕುರಿತ ದಯಾ ಶತಕವು ಅತ್ಯಂತಭಾವನಾಮಯವಾದ ಭಕ್ತಿಗೀತೆ. ಇದರ ಮುಂದಿನ ಎರಡು ಶ್ಲೋಕಗಳಲ್ಲಿ ಆಚಾರ್ಯರು ತಮ್ಮ ಆಕಿಂಚನ್ಯವನ್ನು ಭಗವಂತನ ದಯೆಯ ಪುರುಷಕಾರವನ್ನು ಬಹು ಹೃದಯಂಗಮವಾಗಿ ವರ್ಣಿಸಿದ್ದಾರೆ.

ಅಹಮಸ್ಮ್ಯಪರಾಧ ಚಕ್ರವರ್ತೀ
ಕರುಣೇ ತ್ವಂ ಚ ಗುಣೇಷು ಸಾರ್ವಭೌಮೀ।
ವಿದುಷೀ ಸ್ಥಿತಿ ಮೀದೃಶೀಂ ಸ್ವಯಂ ಮಾಂ
ವೃಷಶೈಲೇಶ್ವರ ಪಾದಸಾತ್ಕುರು ತ್ವಮ್।
ಫಲವಿತರಣದಕ್ಷಂ ಪಕ್ಷಪಾತಾನಭಿಜ್ಞಂ
ಪ್ರಗುಣ ಮನುವಿಧೇಯಂ
ಪ್ರಾಪ್ಯ ಪದ್ಮಾಸಹಾಯಮ್।
ಮಹತಿ ಗುಣಸಮಾಜೇ
ಮಾನಪೂರ್ವಂ ದಯೇ ತ್ವಂ।
ಪ್ರತಿವದಸಿ ಯಥಾರ್ಹಂ
ಪಾಪ್ಮನಾಂ ಮಾಮಕಾನಾಮ್॥

ಅವರ 'ಶ್ರೀಸ್ತುತಿ'ಯ ಮುಂದಿನ ಪದ್ಯಗಳು ಶ್ರೀದೇವಿಯ ಶೀಲಗುಣಗಳನ್ನು ಬಹು ಉಚ್ಚರೀತಿಯಲ್ಲಿ ಚಿತ್ರಿಸುತ್ತವೆ.

ಈಶಾನಾಂ ಜಗತೋಽಸ್ಯ
ವೇಙ್ಕಟಪತೇ ರ್ವಿಷ್ಣೋಃ ಪರಾಂ ಪ್ರೇಯಸೀಂ
ತದ್ವಕ್ಷಃಸ್ಥಲನಿತ್ಯವಾಸರಸಿಕಾಂ
ತತ್ಕ್ಷಾಂತಿ ಸಂವರ್ಧಿನೀಮ್।
ಪದ್ಮಾಲಂಕೃತ ಪಾಣಿಪಲ್ಲವ ಯುಗಾಂ
ಪದ್ಮಾಸನಸ್ಥಾಂ ಶ್ರಿಯಂ

ವಾತ್ಸಲ್ಯಾದಿ ಗುಣೋಜ್ಜ್ವಲಾಂ
ಭಗವತೀಂ ವನ್ದೇ ಜಗನ್ಮಾತರಮ್ ॥
ಕಲ್ಯಾಣಾನಾಮ್ ಅವಿಕಲನಿಧಿಃ
ಕ್ವಾಪಿ ಕಾರುಣ್ಯಸೀಮಾ
ನಿತ್ಯಾಮೋದಾ ನಿಗಮವಚಸಾಂ
ಮೌಳಿಮನ್ದಾರಮಾಲಾ।
ಸಂಪದ್ದಿವ್ಯಾ ಮಧುವಿಜಯಿನಃ
ಸಂನಿಧತ್ತಾಂ ಸದಾ ಮೇ
ಸೈಷಾ ದೇವೀ ಸಕಲ ಭುವನ
ಪ್ರಾರ್ಥನಾ ಕಾಮಧೇನುಃ॥

ಅವರ ಕಾಮಾಸಿಕಾಷ್ಟಕದಲ್ಲಿ

ತ್ವಯಿ ರಕ್ಷತಿ ರಕ್ಷಕೈಃ ಕಿಮನ್ಯೈ
ಸ್ತ್ವಯಿ ಚಾರಕ್ಷತಿ ರಕ್ಷಕೈಃ ಕಿಮನ್ಯೈಃ।
ಇತಿ ನಿಶ್ಚಿತಧೀಃ ಶ್ರಯಾಮಿ ನಿತ್ಯಂ
ನೃಹರೇ ವೇದವತೀ ತಟಾಶ್ರಯಂ ತ್ವಾಮ್ ॥

–ಅನನ್ಯ ಶರಣತ್ವವು ಪ್ರತಿಪಾದಿತವಾಗಿದೆ.

ಅವರ 'ಗೋಪಾಲ ವಿಂಶತಿ'ಯು ಶ್ರೀಕೃಷ್ಣನನ್ನು ಕುರಿತ ಸುಂದರ ಕಾವ್ಯ. ಅದರ ಮುಂದಿನ ಎರಡು ಶ್ಲೋಕಗಳಲ್ಲಿ ಆಚಾರ್ಯರು ಶ್ರೀಕೃಷ್ಣನ ನವನೀತ ಚೌರ್ಯವನ್ನು ಗೋಪೀವಸ್ತ್ರಾಪಹರಣವನ್ನು ಬಹು ಹೃದಯಂಗಮವಾಗಿ ದೃಷ್ಟಿಗೋಚರವಾಗುವಂತೆ ಮಾಡಿದ್ದಾರೆ.

ಹರ್ತುಂ ಕುಮ್ಭೇ ವಿನಿಹಿತಕರಃ
ಸ್ವಾದು ಹೈಯಙ್ಗವೀನಂ
ದೃಷ್ಟ್ವಾ ದಾಮ ಗ್ರಹಣಚಟುಲಾಂ
ಮಾತರಂ ಜಾತರೋಷಾಮ್।
ಪಾಯಾದೀಷತ್ಪ್ರಚಲಿತಪದೋ
ನಾಪಗಚ್ಛನ್ನ ತಿಷ್ಠನ್
ಮಿಥ್ಯಾಗೋಪಃ ಸಪದಿ ನಯನೇ
ಮೀಲಯನ್ವಿಶ್ವಗೋಪ್ತಾ ॥
ವಾಸೋ ಹೃತ್ವಾ ದಿನಕರಸುತಾ
ಸಂನಿಧೌ ವಲ್ಲವೀನಾಂ
ಲೀಲಾಸ್ಮೇರೋ ಜಯತಿ
ಲಲಿತಾಮಾಸ್ಥಿತಃ ಕುನ್ದಶಾಖಾಮ್।
ಸವ್ರೀಡಾಭಿಸ್ತದನು ವಸನೇ
ತಾಭಿ ರಭ್ಯರ್ಥ್ಯಮಾನೋ
ಕಾಮೀ ಕಶ್ಚಿತ್ಕರ ಕಮಲಯೋಃ
ಅಞ್ಜಲಿಂ ಯಾಚಮಾನಃ ॥

ಅವರ ಅಧ್ಯಾತ್ಮ ಗೀತೆಯಾದ ನ್ಯಾಸವಿಂಶತಿಯ ಮುಂದಿನ ಶ್ಲೋಕದಲ್ಲಿ ಆದರ್ಶ ಗುರುವಿನ ಸ್ಪಷ್ಟಚಿತ್ರವು ಉಕ್ತವಾಗಿದೆ.

ಸಿದ್ಧಂ ಸತ್ಸಂಪ್ರದಾಯೇ ಸ್ಥಿರಧಿಯ
ಮನಘಂ ಶ್ರೋತ್ರಿಯಂ ಬ್ರಹ್ಮನಿಷ್ಠಂ
ಸತ್ವಸ್ಥಂ ಸತ್ಯವಾಚಂ ಸಮಯ
ನಿಯತಯಾ ಸಾಧುವೃತ್ತ್ಯಾ ಸಮೇತಮ್।
ಡಮ್ಭಾಸೂಯಾದಿಮುಕ್ತಂ ಜಿತವಿಷಯಗಣಂ
ದೀರ್ಘಬನ್ಧುಂ ದಯಾಳುಂ
ಸ್ಖಾಲಿತ್ಯೇ ಶಾಸಿತಾರಂ ಸ್ವಪರಹಿತಪರಂ
ದೇಶಿಕಂ ಭೂಷ್ಣು ರೀಪ್ಸ್ಯೇತ್ ॥

ಅವರ ಇತರ ಎಲ್ಲ ಸ್ತೋತ್ರಗಳಲ್ಲೂ ಉಚ್ಚಕಾವ್ಯ ಸೌರಭವೂ ಭಕ್ತಿ ಪ್ರಪತ್ತಿಗಳ ಮೇಳನವೂ ಬಹು ಸ್ವಾರಸ್ಯವಾಗಿ ಮೇಳನವಾಗಿವೆ. ಮುಂದೆ ಅದ್ವೈತ ವಿದ್ವಾಂಸರಾದ ಅಪ್ಪಯ್ಯ ದೀಕ್ಷಿತರು ವೇದಾಂತದೇಶಿಕರ ವರದರಾಜ ಸ್ತೋತ್ರದ ಮಾದರಿಯಲ್ಲಿಯೇ ಸ್ವರಚಿತ ವ್ಯಾಖ್ಯಾಸಹಿತವಾದ ವರದರಾಜಸ್ತವವೆಂಬ ಸ್ತೋತ್ರವನ್ನು ರಚಿಸಿದ್ದಾರೆ.

೧೬ನೆಯ ಶತಮಾನದಲ್ಲಿ ಕೇರಳ ದೇಶೀಯನಾದ ನಾರಾಯಣ ಭಟ್ಟನೆಂಬುವನು ಬಹು ಮೇಧಾವಿಯೂ ಬಹು ಗ್ರಂಥ ರಚನಾಸಾಮರ್ಥ್ಯವುಳ್ಳವನೂ ಆದ ಕವಿ ವೃಷಭ. ಈತನು ೧೫೮೫ರಲ್ಲಿ ಗುರುವಾಯೂರಿನ ಕೃಷ್ಣಪ್ರಾರ್ಥನಾ ರೂಪವಾದ 'ನಾರಾಯಣೀಯ'ವೆಂಬ ಸ್ತೋತ್ರವನ್ನು ರಚಿಸಿದನು. ಇದು ಭಾಗವತ ಪುರಾಣದ ಸಂಗ್ರಹರೂಪದಲ್ಲಿದೆ. ೧೦೩೬ ಶ್ಲೋಕಗಳೂ ೧೨ ಸ್ಕಂದಗಳಲ್ಲಿ ವಿಭಾಗವಾಗಿದೆ. ಮಲಬಾರಿನಲ್ಲಿ ಇದಕ್ಕೆ ಬಹಳ ಗೌರವವೂ ಪೂಜ್ಯತೆಯೂ ಇರುವುದಲ್ಲದೆ ಪ್ರತಿನಿತ್ಯದ ಪಾರಾಯಣಗ್ರಂಥವೂ ಆಗಿದೆ. ಸುಮಾರು ಕ್ರಿ. ಶ. ೧೬೮೦ರಲ್ಲಿದ್ದ ಸುಪ್ರಸಿದ್ಧ ಅದ್ವೈತ ಪಂಡಿತನಾದ ಮಧುಸೂದನ ಸರಸ್ವತಿಯು 'ಆನಂದಮಂದಾಕಿನೀ' ಎಂಬ ಕೃಷ್ಣನ ಶಿಖಾದಿನಖಾಂತವಾದ ವರ್ಣನೆಯನ್ನು ರಚಿಸಿದ್ದಾನೆ. ಕೃಷ್ಣ–ಚೈತನ್ಯನ ಶಿಷ್ಯನಾದ ರೂಪಗೋಸ್ವಾಮಿಯಿಂದ ರಚಿತವಾದುವು 'ಗಂಧರ್ವಪ್ರಾರ್ಥನಾಷ್ಟಕ' ಮತ್ತು 'ಮುಕುಂದ ಮುಕ್ತಾವಳಿ'. ಮೊಘಲ್ ಚಕ್ರವರ್ತಿ ಷಹಜಹಾನನ ಆಶ್ರಿತನಾದ ಜಗನ್ನಾಥಪಂಡಿತರಿಂದ 'ಸುಧಾಲಹರೀ', 'ಅಮೃತಲಹರೀ', 'ಲಕ್ಷ್ಮೀಲಹರಿ', 'ಕರುಣಾಲಹರೀ' ಮತ್ತು 'ಗಂಗಾಲಹರೀ' ಎಂಬ ಐದು ಗೀತೆಗಳು ರಚಿಸಲ್ಪಟ್ಟಿವೆ. 'ಸುಧಾಲಹರೀ' ೩೦ ಶ್ಲೋಕ ಪರಿಮಾಣವುಳ್ಳ ಸೂರ್ಯ ಪ್ರಾರ್ಥನೆ. ಹತ್ತು ಶ್ಲೋಕಗಳುಳ್ಳ 'ಅಮೃತಲಹರೀ' ಯಮುನಾ ಪ್ರಾರ್ಥನೆ. ೪೧ ಶ್ಲೋಕಗಳಿಂದ ಕೂಡಿದ 'ಲಕ್ಷ್ಮೀ ಲಹರೀ' ತದ್ದೇವತಾತ್ಮಕವಾದುದು. 'ಕರುಣಾಲಹರಿ'ಗೆ 'ವಿಷ್ಣುಲಹರೀ' ಎಂಬ ಅಪರ ನಾಮಧೇಯವೂ ಉಂಟು. ೬೦ ಶ್ಲೋಕಗಳನ್ನುಳ್ಳದ್ದು. 'ಪೀಯೂಷಲಹರೀ'ಎಂಬ ಮತ್ತೊಂದು ಹೆಸರುಳ್ಳ ಗಂಗಾಲಹರಿಯಲ್ಲಿ ೫೨ ಶ್ಲೋಕಗಳಿವೆ. ಗಂಗಾ ಪ್ರಾರ್ಥನಾ ರೂಪವಾದುದು. 'ಶಿವ ಲೀಲಾರ್ಣವ'ದ ಕರ್ತೃವಾದ ನೀಲಕಂಠ ದೀಕ್ಷಿತನು 'ಆನಂದಸಾಗರಸ್ತವ' ಮತ್ತು 'ಶಿವೋತ್ಕರ್ಷಮಂಜರಿ' ಎಂಬ ಸುಂದರ ಸ್ತೋತ್ರಗಳನ್ನು ಹಾಡಿದ್ದಾನೆ. ಇದೇ ಕಾಲಕ್ಕೆ ಸೇರಿದುದು ವೆಂಕಟಾಧ್ವರಿಯಿಂದ ರಚಿತವಾದ 'ಲಕ್ಷ್ಮೀ ಸಹಸ್ರ' ಲಕ್ಷ್ಮೀ ಮತ್ತು ನಾರಾಯಣ ವಿಷಯಕವಾದ ಬಹು ಆಕರ್ಷಕಸ್ತೋತ್ರಗಳು. ರಾಮ ಭಕ್ತಿಗೆ ಪ್ರಧಾನಪಾತ್ರನಾದ ರಾಮಭದ್ರ ದೀಕ್ಷಿತನು ಸುಮಾರು ಕ್ರಿ. ಶ. ೧೭೦೦ರಲ್ಲಿ 'ರಾಮ ಬಾಣಸ್ತವ' ಮತ್ತು 'ಅದ್ಭುತ ರಾಮಸ್ತೋತ್ರ' ಎಂಬ ಎರಡು ಸ್ತೋತ್ರಗಳಲ್ಲಿ ರಾಮಬಾಣದ ಮಹಿಮೆಯನ್ನೂ ಶ್ರೀ ಸೀತಾರಾಮರ ಮಹಿಮೆಯನ್ನೂ ಬಹು ಮನೋಜ್ಞವಾಗಿ ರಚಿಸಿದ್ದಾನೆ. ನಾರಾಯಣ ತೀರ್ಥನು ತನ್ನ ಕೃಷ್ಣಲೀಲಾ ತರಂಗಿಣಿಯಲ್ಲಿ ಕೃಷ್ಣನ ಬಾಲಲೀಲೆಗಳನ್ನು ಮನೋಹರವಾದ ಶೈಲಿಯಲ್ಲಿ ವಿವರಿಸಿದ್ದಾನೆ. ಭಕ್ತಿ ಪಂಥಗಳ ಸಾಮೂಹಿಕ ಸಭೆಯಲ್ಲಿ ಇದನ್ನು ವಿವಿಧ ರೀತಿಗಳಲ್ಲಿ ಹಾಡುತ್ತಾರೆ. ಕಳೆದ ಶತಮಾನದಲ್ಲಿ ನಾದಮಾಧುರ್ಯ ಉಕ್ತಿ ಸೌಂದರ್ಯ ಮತ್ತು ಭಕ್ತಿ ಪಾರಮ್ಯದೃಷ್ಟಿಯಿಂದ ಬಹು ಶ್ಲಾಘ್ಯವಾದವು–ತ್ಯಾಗರಾಜ ಭಾಗವತ, ಮುತ್ತುಸ್ವಾಮಿದೀಕ್ಷಿತ ಮತ್ತು ಶ್ಯಾಮಶಾಸ್ತ್ರಿಗಳ ಕೃತಿಗಳು.

ಭಕ್ತಿಗೀತೆಗಳು ಅಸಂಖ್ಯೇಯವಾದುವು. ವಿವಿಧ ರೂಪದವು. ಇಲ್ಲಿ ಸೂಚಿಸಿರುವುವು ಕೇವಲ ಕೆಲವು ಮಾತ್ರ. ಈ ರಾಶಿಯಲ್ಲಿ ಒಂದೊಂದೂ ಐಹಿಕಾಮುಷ್ಮಿಕ ಸಾಧಕವೂ ಮನೋಜ್ಞವೂ ಆದುದು. ಇದರಲ್ಲಿ ಯಾವುದೊಂದನ್ನೂ ಚಿತ್ತ ಶುದ್ಧಿಯಿಂದ ಅನುಸಂಧಾನ ಮಾಡಿದರೆ ಬಹು ಆನಂದದಾಯಕವಾಗಿರುತ್ತದೆ.



# ಕುಲಶೇಖರಾಳ್ವಾರ್

ಕುಂಭೇ ಪುನರ್ವಸೌ ಜಾತಂ
ಕೇರಳೇ ಚೋಳಪಟ್ಟಣೇ
ಕೌಸ್ತುಭಾಂಶಂ ಧರಾಧೀಶಂ
ಕುಲಶೇಖರ ಮಾಶ್ರಯೇ ॥

ಷುಷ್ಯತೇ ಯಸ್ಯ ನಗರೇ
ರಂಗಯಾತ್ರಾ ದಿನೇ ದಿನೇ
ತಮಹಂ ಶಿರಸಾ ವಂದೇ
ರಾಜಾನಂ ಕುಲಶೇಖರಂ ॥

ಪಶ್ಚಿಮ ಸಮುದ್ರತೀರದ ಕೇರಳದೇಶವು ಅತ್ಯಂತ ರಮಣೀಯವಾದುದು. ಈ ದೇಶವನ್ನು ದೃಢವ್ರತನೆಂಬ ರಾಜನು ಆಳುತ್ತಿದ್ದನು. ಇಲ್ಲಿ ಪ್ರಜೆಗಳು ರಾಮರಾಜ್ಯದಂತೆ ಸುಖಸಂತೋಷದಿಂದ ಇದ್ದರು. ರಾಜನಿಗೆ ಮಕ್ಕಳಾಗಿರಲಿಲ್ಲ. ರಾಜನು ಕುಲದೇವರಾದ ಅನಂತಪದ್ಮನಾಭ ಸ್ವಾಮಿಯನ್ನು ಬಹುಭಕ್ತಿಯಿಂದ ಆರಾಧಿಸಿ ವರ ಬೇಡಿ, ಸ್ವಾಮಿಯ ಪರಿಪೂರ್ಣಕೃಪೆಗೆ ಪಾತ್ರನಾದನು. ರಾಜನ ಅನನ್ಯಭಕ್ತಿಗೆ ಪ್ರೀತನಾಗಿ, ಸ್ವಾಮಿಯು ತನ್ನ ಕೌಸ್ತುಭಾಂಶದಿಂದ ಒಂದು ಪುತ್ರರತ್ನವನ್ನು ಕರುಣಿಸಿದನು. ತನ್ನ ಕುಲಕ್ಕೆ ಶಿಖರಪ್ರಾಯವಾಗಿ ಜನಿಸಿದ ಮಗುವಿಗೆ ರಾಜನು ಕುಲಶೇಖರ ಎಂದು ನಾಮಕರಣಮಾಡಿದನು.

ಶುಕ್ಲಪಕ್ಷದ ಚಂದ್ರನಂತೆ ಮಗುವು ಬೆಳೆಯುತ್ತಿತ್ತು. ಮಗುವಿಗೆ ಜಾತಕರ್ಮ, ಚೌಲೋಪನಯನಾದಿ ಸಂಸ್ಕಾರಗಳನ್ನೆಲ್ಲ ರಾಜನು ನೆರವೇರಿಸಿದನು. ಮತ್ತು ವಿದ್ಯಾಭ್ಯಾಸವೂ ಪ್ರಾರಂಭವಾಯಿತು. ಶ್ರೀಕೃಷ್ಣನು ಸಾಂದೀಪಿನೀ ಗುರುಕುಲದಲ್ಲಿ ಸಕಲ ವಿದ್ಯೆಗಳನ್ನು ಕಲಿತಂತೆ ಕುಲಶೇಖರರೂ ಕೂಡಾ ಗುರುಮುಖೇನ ಎಲ್ಲ ವಿದ್ಯೆಗಳನ್ನೂ ಕಲಿತರು. ರಾಜಕುಲಸಂಪನ್ನನಾದ ಬಾಲಕನ ಬುದ್ಧಿಕುಶಲತೆಯನ್ನು ಗುರುವು ಮೆಚ್ಚಿ ವೇದಶಾಸ್ತ್ರ, ಧನುರ್ವಿದ್ಯೆಗಳನ್ನು ಹೇಳಿಕೊಟ್ಟನು. ವಿದ್ಯಾಪಾರಂಗನಾದ ಪುತ್ರನಿಗೆ ರಾಜನು ಯುವರಾಜ್ಯಾಭಿಷೇಕ ಮಾಡಿ ರಾಜ್ಯಭಾರ ವಿಷಯವನ್ನು ತಿಳಿಸಿದನು ಪುತ್ರನ ಸಾಮರ್ಥ್ಯವನ್ನು ಕಂಡು ಆನಂದಭರಿತನಾದ ದೃಢವ್ರತರಾಜನು ಚೋಳ ಸಾಮ್ರಾಜ್ಯವನ್ನು ಮಗನಿಗೆ ವಹಿಸಿ ತಾನು ವಾನಪ್ರಸ್ಥ ಆಶ್ರಮವನ್ನು ಕೈಗೊಂಡು ಅರಣ್ಯಕ್ಕೆ ತೆರಳಿದನು.

ಕುಲಶೇಖರರು ರಾಜ್ಯಾಧಿಕಾರ ವಹಿಸಿಕೊಂಡು ಸಮರ್ಥರಾಗಿ ಪ್ರಜಾಪರಿಪಾಲನ ಮಾಡುತ್ತಿದ್ದರು. ಸ್ವಭಾವತಃ ಅವರು ಆಸ್ತಿಕರು. ಭಗವದ್ಭಾಗವತರಲ್ಲಿ ಅಪಾರ ಗೌರವಭಕ್ತಿಯುಳ್ಳವರು. ತಮ್ಮ ವಿರಾಮಕಾಲದಲ್ಲಿ, ಪುರಾಣಶ್ರವಣ, ಹರಿಕಥೆ, ಇತಿಹಾಸಾದಿ ವಿಷಯಗಳನ್ನು ತಪ್ಪದೆ ಕೇಳಿ ತಿಳಿದುಕೊಳ್ಳುತ್ತಿದ್ದರು. ಶೇಷೈಮೊದಲಿಯಾಂಡಾರ್ ಎಂಬ ಗುರುಗಳಲ್ಲಿ ಶ್ರೀವೈಷ್ಣವ ದೀಕ್ಷೆಯನ್ನು ಕೈಗೊಂಡು ಪಂಚಕಾಲಕೃತ್ಯ ನಡೆಸುತ್ತ, ಧರ್ಮನಿರತರಾಗಿದ್ದರು. 'ಯಥಾ ರಾಜಾ ತಥಾ ಪ್ರಜಾಃ' ಎಂಬಂತೆ ಪ್ರಜೆಗಳೂ ಕೂಡ ಪುರಾಣಶ್ರವಣ, ಭಜನೆ, ಕೀರ್ತನಾದಿಗಳಲ್ಲಿ ವಿಶೇಷ ಆಸಕ್ತಿ ವಹಿಸಿ ಇರುತ್ತಿದ್ದರು.

ಕುಲಶೇಖರರು ಹೀಗೆ ವೈದಿಕಶ್ರದ್ಧೆಯಿಂದ ಧರ್ಮಕಾರ್ಯಗಳಲ್ಲಿ ತೊಡಗಿದ್ದಾಗ, ಅವರು ಪ್ರಸಿದ್ಧ ಯಾತ್ರಾಕ್ಷೇತ್ರಗಳ ವೈಭವ, ಮಹಿಮೆಯನ್ನು ಕೇಳಿ ತಿಳಿಯುತ್ತಿದ್ದರು. ಬ್ರಹ್ಮದೇವನಿಂದ ಲಬ್ಧವಾಗಿ ಶ್ರೀರಾಮನಿಂದ ಆರಾಧಿಸಲ್ಪಟ್ಟು ವಿಭೀಷಣನಿಗೆ ದತ್ತವಾದ ಶ್ರೀರಂಗದಲ್ಲಿ ಪ್ರತಿಷ್ಠಿತವಾದ ಶ್ರೀರಂಗನಾಥನ ವೈಭವವನ್ನು ಕೇಳಿದಾಗಲಂತೂ, ರಾಜನಿಗೆ ಅಲ್ಲಿಗೆ ಹೋಗಿ; ಸ್ವಾಮಿಯನ್ನು ಆರಾಧಿಸಿ ಕೃತಾರ್ಥನಾಗಬೇಕೆಂಬ ಆಸೆ ಹುಟ್ಟಿತು. ಹಾಗೆಯೇ ತಿರುಪತಿ ವೆಂಕಟೇಶ್ವರ ಸ್ವಾಮಿಯ ಮಹಿಮೆಯನ್ನು ಕೇಳಿದಾಗ ಅವರು ಭಕ್ತಿಪರವಶರಾಗಿ ಎಂದು ಆ ಸ್ವಾಮಿಯ ದರ್ಶನ ಲಾಭ ದೊರಕುವುದೆಂದು ಹಾತೊರೆಯುತ್ತಿದ್ದರು.

ಲೋಕಕ್ಕೆ ಆದರ್ಶಪ್ರಾಯನಾಗಿ, ಆದರ್ಶ ಮಹಾಪುರುಷನೆಂದು ಅವತರಿಸಿ, ದುಷ್ಟಶಿಕ್ಷೆ ಶಿಷ್ಟರಕ್ಷಣೆ ಮಾಡಿದ ಶ್ರೀರಾಮನಲ್ಲಿ ಕುಲಶೇಖರರಿಗೆ ಅಪಾರ ಭಕ್ತಿಗೌರವ ಇದ್ದಿತು. ನಿತ್ಯವೂ ರಾಮಾಯಣ ಪಾರಾಯಣ ಮಾಡಿಸಿ, ಪುರಾಣ ಶ್ರವಣ ಮಾಡುತ್ತಿದ್ದರು. ತಾವೇ ಸ್ವತಃ ರಾಮಾಯಣ, ಗೀತಾಪಾರಾಯಣದಲ್ಲಿ ನಿರತರಾಗಿರುತ್ತಿದ್ದರು. ಪುರಾಣ ಶ್ರವಣ ಕಾಲದಲ್ಲಿ ನಡೆದ ಅನೇಕ ಐತಿಹ್ಯಗಳು ಅವರ ಚರಿತ್ರೆಯಲ್ಲಿ ಬರುತ್ತವೆ.

ಒಂದುಸಲ, ಶ್ರೀರಾಮನು ಏಕಾಕಿಯಾಗಿ ಹದಿನಾಲ್ಕು ಸಾವಿರ ರಾಕ್ಷಸಸೈನ್ಯದಿಂದ ಸಿದ್ಧವಾಗಿದ್ದ ಖರದೂಷಣಾದಿ ರಾಕ್ಷಸರನ್ನು ನಾಶ ಮಾಡಲು ಧನುರ್ಬಾಣಗಳನ್ನು ತೆಗೆದುಕೊಂಡನು ಎಂದು ಪುರಾಣಿಕರು ಆ ಕಥಾಸಂದರ್ಭವನ್ನು ವಿವರಿಸುತ್ತಿದ್ದಾಗ, ಕುಲಶೇಖರರು ಅದು ನಿಜವೆಂದೇ ಭ್ರಮಿಸಿ, ತಮ್ಮ ಸೈನ್ಯವು ಶ್ರೀರಾಮನ ಸಹಾಯಕ್ಕೆ ಹೋಗಬೇಕೆಂದು ಅಪ್ಪಣೆಮಾಡಿದರಂತೆ. ಇನ್ನೊಂದು ಸಲ ಅರಮನೆ ಅಧಿಕಾರಿಗಳು, ಶ್ರೀ ವೈಷ್ಣವರು ದೇವಾಲಯದ ಆಭರಣಗಳನ್ನು ಅಪಹರಿಸಿದ್ದಾರೆ ಎಂಬ ದೂರು ತಿಳಿಸಲು ರಾಜನು ಅವನ್ನು ನಂಬದೆ, ಒಂದು ಬಿಂದಿಗೆಯಲ್ಲಿ ಸರ್ಪವನ್ನು ಇಡಿಸಿ, ಆರೋಪಣದ ನಿಜಾಂಶವನ್ನು ಪರೀಕ್ಷಿಸಲು, ಬಿಂದಿಗೆಯಲ್ಲಿ ಕೈ ಇಡುವಂತೆ ಮಾಡಿದನಂತೆ. ಆದರೆ ಅಧಿಕಾರಿಗಳು ಭಯಪಟ್ಟು, ನಿಜಾಂಶವನ್ನು ರಾಜನಿಗೆ ತಿಳಿಸಿ, ತಮ್ಮ ಅಪರಾಧವನ್ನು ಕ್ಷಮಿಸುವಂತೆ ಬೇಡಿದರಂತೆ. ಹೀಗೆ ರಾಜನು ಭಗವದ್ಭಾಗವತರಲ್ಲಿ ಅಪಾರ ಭಕ್ತಿ, ಗೌರವಗಳನ್ನು ಇಟ್ಟಿದ್ದನು.

ಶ್ರೀ ವೈಷ್ಣವ ಅಗ್ರೇಸರ ಸಾರ್ವಭೌಮರೂ, ಶ್ರೀ ವೈಷ್ಣವ ಪವಿತ್ರ ಗ್ರಂಥಗಳಲ್ಲಿ ಪರಿಣತರೂ, ಆದ ಕುಲಶೇಖರರು, ಶ್ರೀರಂಗದ ಶ್ರೀರಂಗನಾಥ ಸ್ವಾಮಿಯ ದರ್ಶನಕ್ಕಾಗಿ ತಮ್ಮ ಪರಿವಾರ ಸಮೇತ ದಯಮಾಡಿಸಿದರು. ಅತ್ಯಂತ ವೈಭವಯುತವಾಗಿ ಆರಾಧಿಸಲ್ಪಡುತ್ತಿದ್ದ ಸ್ವಾಮಿಯ ಮಹಿಮೆಯನ್ನು ಕಂಡು ಆನಂದಭರಿತರಾದರು. ಅವರ ಭಕ್ತಿ ಮಿತಿಮೀರಿ ವೃದ್ಧಿ ಆಯಿತು. ಇಂತಹ ದಿವ್ಯ ಅನುಭವವನ್ನು ಲೋಕೋಪಕಾರಾರ್ಥವಾಗಿ ಇತರರೂ ತಿಳಿಯಲಿ ಎಂಬ ಉದಾರ ಮನಸ್ಸಿನಿಂದ ಪೆರುಮಾಳ್ ತಿರುಮೊಳಿ ಎಂಬ ದಿವ್ಯಪ್ರಬಂಧವನ್ನು ರಚಿಸಿದ್ದಾರೆ. ಇದರಲ್ಲಿ ಮಾಯಾಪ್ರಪಂಚದ ರಹಸ್ಯವನ್ನೂ, ವಿಶ್ವಾತೀತನಾದ ಪರಮಾತ್ಮನ ಧ್ಯಾನ, ಪೂಜನ, ಸ್ಮರಣ ವಿಧಾನವನ್ನೂ ತಿಳಿಸಿದ್ದಾರೆ.

ಪೆರುಮಾಳ್ ತಿರುಮೊಳಿಯ ಒಂದೊಂದು ದಶಕದಲ್ಲಿಯೂ ಆಳ್ವಾರರು ಒಂದೊಂದು ಅನುಭವವನ್ನು ವಿವರಿಸಿ ಪರಮಾತ್ಮ ಸಾಕ್ಷಾತ್ಕಾರಕ್ಕೆ ಮನಸ್ಸನ್ನು ಸಿದ್ಧಪಡಿಸುತ್ತಾರೆ. ಶರಣಾಗತಿ ಸಿದ್ಧಾಂತದ ತಂತ್ರವನ್ನು ಅನುಸರಿಸುತ್ತಾರೆ. ಶರಣಾಗತಿಯ ಅಂಗಗಳಾದ ಆನುಕೂಲ್ಯಸಂಕಲ್ಪ, ಪ್ರಾತಿಕೂಲ್ಯವರ್ಜನ, ಮಹಾವಿಶ್ವಾಸ, ಗೋಪ್ತೃತ್ವವರಣ, ಕಾರ್ಪಣ್ಯ, ಆತ್ಮ ಸಮರ್ಪಣ ಇತ್ಯಾದಿಗಳ ಸ್ವರೂಪವನ್ನು ತಿಳಿಸುತ್ತಾರೆ. ಪರಮಾತ್ಮನ ನಿರಂತರ ಧ್ಯಾನವು ಪರಮ ಭಕ್ತಿಯಾಗಿ ಪರಿಣಮಿಸಿ, ಚೇತನನು ತಾನಿರುವುದು ಪರಮಾತ್ಮನಿಗಾಗಿ ಮತ್ತು ಅವನ ಪ್ರೀತಿಗಾಗಿ

ಡಿ. ಕೃಷ್ಣ ಅಯ್ಯಂಗಾರ್

ಎಂಬ ಭಾವನೆ ಮೂಡುವುದು. ಇದನ್ನು ಶರಣಾಗತಿಯು ಪ್ರಚೋದಿಸುವುದು ಎಂದು ಕುಲಶೇಖರರು ತಿಳಿಸಿದ್ದಾರೆ.

ರಾಮಕೃಷ್ಣಾದಿ ಅವತಾರಗಳು ಇತಿಹಾಸ ವೃತ್ತಾಂತ. ಈ ರಹಸ್ಯಗಳ ಉದ್ದೇಶ ಮತ್ತು ಮಹಿಮೆಯನ್ನು ತಿಳಿಯುವುದಕ್ಕೆ ಪರಮಾತ್ಮನ ಅರ್ಚಾಮೂರ್ತಿಗಳ ದರ್ಶನ, ಪೂಜನ, ಧ್ಯಾನಾದಿಗಳು ನಿರಂತರ ನಡೆಯಬೇಕು. ಇದರಿಂದ ಪರಮಾತ್ಮಸ್ವರೂಪದ ವೈಭವ ತಿಳಿಯಬಹುದು. ಪರಮಾತ್ಮಾನುಗ್ರಹ ಪಡೆಯುವುದೇ ಚೇತನನ ಉದ್ದೇಶವಾಗಿರಬೇಕೆಂದು ಆಳ್ವಾರರು ತಿಳಿಸುತ್ತಾರೆ.

ಪೆರುಮಾಳ್ ತಿರುಮೊಳಿಯ ಒಂದು ಶ್ಲೋಕದಲ್ಲಿ ಕುಲಶೇಖರರು ಹೀಗೆ ಪ್ರಾರ್ಥಿಸಿದ್ದಾರೆ. "ತಾಯಿಯು ಮಗನನ್ನು ತಳ್ಳಿ ಭಯಹುಟ್ಟಿಸಿದರೂ ಅದು ಅವಳ ಬಳಿಗೆ ಬಂದು ಅವಳ ಅನುಗ್ರಹಕ್ಕಾಗಿ ಕಾಡುವುದು. ಹೇ! ಪರಮಾತ್ಮಾ! ಅಂತಹ ಮಗುವಿನಂತೆ ನಾನು ಶೋಕಿಸುತ್ತಿದ್ದೇನೆ. ಒಳ್ಳೆಯ ಕುಲದಲ್ಲಿ ಹುಟ್ಟಿದ ಸ್ತ್ರೀಯು, ಇತರರು ಎಷ್ಟೇ ಹಾಸ್ಯಮಾಡಿದರೂ, ಅವೊಂದನ್ನು ಲೆಕ್ಕಿಸದೆ, ತನ್ನ ಪತಿಯನ್ನು ಧ್ಯಾನಿಸುವಂತೆ, ನಾನು ಯಾವಾಗಲೂ ನನ್ನ ಸ್ವಾಮಿಯಾದ ನಿನ್ನನ್ನು ಸ್ತೋತ್ರಮಾಡುತ್ತೇನೆ" ಎಂದು ಆಳ್ವಾರರು ಅನೇಕ ಸಾಮ್ಯಗಳನ್ನು ತೋರಿಸಿದ್ದಾರೆ. ತಮ್ಮ ಮತ್ತು ಪರಮಾತ್ಮ ಸಂಬಂಧ ಭಕ್ತಿರೂಪವಾದುದು, ಪವಿತ್ರವಾದುದು, ಶಾಶ್ವತವಾದುದು, ತಾಯಿ – ಮಗುವಿನಂತೆ, ಪತಿ – ಪತ್ನಿಯರಂತೆ, ರಾಜ–ಪ್ರಜೆಗಳಂತೆ, ಸಹಜ ಪ್ರವೃತ್ತಿಯದಾಗಿರಬೇಕೆಂದು ಬೇಡುತ್ತಾರೆ.

ಪರಮಾತ್ಮನ ಅವತಾರ ರಹಸ್ಯ, ಅತೀಂದ್ರಿಯ ಮಹತ್ವ, ಪುರಾಣಸಾಹಿತ್ಯತತ್ತ್ವ ಮತ್ತು ಅಮಾನುಷತ್ವ–ಇತ್ಯಾದಿ ವಿಷಯಗಳನ್ನು, ಆಳ್ವಾರರು, ದೇವಕಿ–ಕೃಷ್ಣ, ಕೌಸಲ್ಯ–ಶ್ರೀರಾಮ ಇತ್ಯಾದಿ ಕಥಾಸಂದರ್ಭಗಳಲ್ಲಿ ಸ್ಪಷ್ಟಪಡಿಸಿದ್ದಾರೆ. ಹಾಗೆಯೇ ದಶರಥ–ಶ್ರೀರಾಮರ ಪಿತಾ–ಪುತ್ರ ಸಂಬಂಧ ಮತ್ತು ವಿರಹ ಆತ್ಮ–ಪರಮಾತ್ಮ ಸಂಬಂಧ ಇತ್ಯಾದಿ ವಿಷಯಗಳನ್ನು ಅಳವಡಿಸಿದ್ದಾರೆ. ಹೀಗೆ ಇಡೀ ರಾಮಾಯಣ ಕಥೆಯನ್ನು, ಆಳ್ವಾರರು ಪೆರುಮಾಳ್ ತಿರುಮೊಳಿಯಲ್ಲಿ ಸಂಗ್ರಹಿಸಿದ್ದಾರೆ.

ಕುಲಶೇಖರ ಆಳ್ವಾರರ ಇನ್ನೊಂದು ಪ್ರಸಿದ್ಧವಾದ ಕೃತಿ ಮುಕುಂದಮಾಲಾ ಸ್ತೋತ್ರ. ಕೃತಿಯ ಹೆಸರೇ ಅನ್ವರ್ಥವಾಗಿದೆ. ಈ ಸ್ತೋತ್ರವು ಬಹು ಸುಲಭವೂ, ಸರಳವೂ, ಆಕರ್ಷಯುತವೂ ಆಗಿದೆ. ಇದು ಭಕ್ತಿ ಪ್ರಚೋದಕವಾಗಿರುವುದಲ್ಲದೆ ಇದರಲ್ಲಿ ಭಗವದ್ಗೀತಾತತ್ತ್ವಗಳನ್ನು ಅಳವಡಿಸಲಾಗಿದೆ. ನಲವತ್ತು ಶ್ಲೋಕಗಳ ಈ ಮಾಲೆಯನ್ನು ಕುಲಶೇಖರರು ಮುಕುಂದನಿಗೆ ಅರ್ಪಿಸಿದ್ದಾರೆ. ಆಬಾಲವೃದ್ಧರಾದಿಯಾಗಿ, ಈ ಸೊಗಸಾದ ಸ್ತೋತ್ರವನ್ನು ನಿತ್ಯವೂ ಪಾರಾಯಣ ಮಾಡಿ, ಆನಂದಪಡುತ್ತಿದ್ದಾರೆ.

ಪರಮಾತ್ಮನ ಕೌಸ್ತುಭಮಣಿಯ ಅಂಶದಿಂದ ಅವತರಿಸಿದ ಕುಲಶೇಖರರು ಚೇತನೋದ್ಧಾರಕ್ಕಾಗಿ ಅವರ ಜನ್ಮಸಾಫಲ್ಯಕ್ಕಾಗಿ ಶ್ರೀ ಕೃಷ್ಣರಸಾಯನವನ್ನು ಕುಡಿಸಲು ಇಷ್ಟಪಟ್ಟು ಈ ಸ್ತೋತ್ರವನ್ನು ರಚಿಸಿದ್ದಾರೆ. ಅದರ ಒಂದೊಂದು ಶ್ಲೋಕವೂ ಭಕ್ತಿಪ್ರಚೋದಕವೂ ಪಠಿಸಲು ಆನಂದದಾಯಕವೂ ಆಗಿದೆ.

ಶ್ರೀ ವಲ್ಲಭೇತಿ ವರದೇತಿ
ದಯಾಪರೇತಿ ಭಕ್ತಪ್ರಿಯೇತಿ
ಭವಲುಂಠನಕೋವಿದೇತಿ
ನಾಥೇತಿ ನಾಗಶಯನೇತಿ
ಜಗನ್ನಿವಾಸೇ ತ್ಯಾಲಾಪನಂ
ಪ್ರತಿಪದಂ ಕುರು ಮೇ ಮುಕುಂದ ॥

ಎಂದು ಪ್ರಾರಂಭದಲ್ಲಿ ಪ್ರಾರ್ಥಿಸಲಾಗಿದೆ.

ಹೇ! ಮೋಕ್ಷಪ್ರದನಾದ ಪರಮಾತ್ಮನೇ! ನೀನು ಲಕ್ಷ್ಮೀರಮಣನು. ಇಷ್ಟಾರ್ಥವನ್ನು ಕೊಡುವವನು. ಶರಣಾಗತರಿಗೆ ಕರುಣಾಶಾಲಿ. ಭಕ್ತರಿಗೆ ಅಭಯಕೊಡುವವನು. ನಿನ್ನ ಚರಣಕಮಲಗಳನ್ನು ಆಶ್ರಯಿಸಿದ ಕಿಂಕರರಿಗೆ ನೀನು ವಿಶ್ವಾಸಿಯು. ಕಲ್ಮಷಯುಕ್ತವಾಗಿ/ಅಗೌರವವಾದ ಈ ಸಂಸಾರ ಸಂಬಂಧವನ್ನು ಬಿಡಿಸಿ, ಪುರುಷಾರ್ಥ ಕೊಡುವುದರಲ್ಲಿ ಸಮರ್ಥನು. ಅಖಿಲಾಂಡ ಕೋಟಿ ಬ್ರಹ್ಮಾಂಡನಾಯಕನು ನೀನು. ಸಹಸ್ರ ಫಣಿಯುಕ್ತನಾದ ಆದಿಶೇಷನನ್ನು ಪರ್ಯಂಕವಾಗುಳ್ಳವನು. ಇಂತಹ ನಿನ್ನ ದಿವ್ಯನಾಮಗಳನ್ನು ಪ್ರತಿಕ್ಷಣದಲ್ಲಿ ಉಚ್ಚರಿಸಿ ಸಮಸ್ತ ಪಾಪಗಳನ್ನು ಪರಿಹಾರಮಾಡಿಕೊಳ್ಳುವ ಭಾಗ್ಯವನ್ನು ನನಗೆ ಕರುಣಿಸು. ಈ ಸ್ತೋತ್ರದ ಪ್ರತಿಯೊಂದು ಶ್ಲೋಕವೂ ವಿಶೇಷಾರ್ಥಗಳನ್ನು ಒಳಗೊಂಡಿದೆ. ಆಳ್ವಾರರು ಗೀತಾರಹಸ್ಯಾರ್ಥಗಳನ್ನೆಲ್ಲಾ ಇಲ್ಲಿ ಕೊಡಿಸಿದ್ದಾರೆ.

"ದೇವಕೀಪುತ್ರನಾದ ದೇವದೇವನು ಜಯಶೀಲನಾಗಿರಲಿ. ಯದುವಂಶ ಪ್ರಕಾಶನಾದ ಶ್ರೀ ಕೃಷ್ಣನು ಜಯಶೀಲನಾಗಿರಲಿ. ಶ್ಯಾಮಲವಾದ ಮನೋಹರ ಶರೀರವುಳ್ಳ ವಿಷ್ಣುವು ಜಯಶೀಲನಾಗಿರಲಿ, ಭೂಮಿಗೆ ಭಾರವಾದ ದುಷ್ಟರನ್ನು ನಿಗ್ರಹಿಸಿ, ಮೋಕ್ಷಸಾಮ್ರಾಜ್ಯವನ್ನು ಕೊಡುವ ಮುಕುಂದನು ಜಯಶೀಲನಾಗಿರಲಿ" ಎಂದು ಪ್ರಾರ್ಥಿಸಿದ್ದಾರೆ ಆಳ್ವಾರರು.

ಬಹುಜನಪ್ರಿಯವಾದ, ಆಕರ್ಷಯುತವಾಗಿ, ಹಾಡಲು ಆನಂದದಾಯಕವಾಗಿರುವ ಇನ್ನೊಂದು ಶ್ಲೋಕ ಹೀಗಿದೆ.

ಭಕ್ತಾಪಾಯ ಭುಜಂಗ ಗಾರುಡಮಣಿಃ
ತ್ರೈಲೋಕ್ಯ ರಕ್ಷಾಮಣಿಃ
ಗೋಪೀಲೋಚನ ಚಾತಕಾಂ
ಬುಜಮಣಿಃ ಸೌಂದರ್ಯಮುದ್ರಾಮಣಿಃ
ಯಃ ಕಾಂತಾಮಣಿ ರುಕ್ಮಿಣೀ
ಘನಕುಚ ದ್ವಂದ್ವೈಕ ಭೂಷಾಮಣಿಃ
ಶ್ರೇಯೋದೇವ ಶಿಖಾಮಣಿ
ರ್ದಿಶತು ನೋ ಗೋಪಾಲಚೂಡಾಮಣಿಃ ॥

ಹೇ! ಪರಮಾತ್ಮ ಸ್ವರೂಪಿಯಾದ ಮುಕುಂದ! ಭಕ್ತರ ಆಪತ್ತುಗಳೆಂಬ ಸರ್ಪಗಳಿಗೆ ನೀನು ನಾಶಕರ ಗರುಡಮಣಿಯಾಗಿರುವೆ. ಮೂರುಲೋಕ ರಕ್ಷಣೆಯಲ್ಲಿ ದಕ್ಷನಾಗಿರುವೆ. ಗೋಪಸ್ತ್ರೀಯರಿಗೆ ನೇತ್ರಾನಂದಕರನಾಗಿರುವೆ. ಸೌಂದರ್ಯಾತಿಶಯಕ್ಕೆ ಮುದ್ರಾಮಣಿಯಾಗಿ ರುಕ್ಮಿಣೀದೇವಿಯ ಘನಕುಚಗಳಿಗೆ ಮುಖ್ಯಾಭರಣನಾಗಿರುವೆ. ಅಂತಹ ದೇವಶಿಖಾಮಣಿಯಾದ, ಗೋಪಾಲ ತಿಲಕನಾದ ಸರ್ವಶ್ರೇಷ್ಠ ಮೂರ್ತಿಯಾದ ಶ್ರೀಕೃಷ್ಣನು ನಮ್ಮಗಳಿಗೆ ಶ್ರೇಯಸ್ಸನ್ನುಂಟುಮಾಡಲಿ. ಈ ಶ್ಲೋಕದಲ್ಲಿ ಭಗವದ್ಗೀತಾವಾಕ್ಯಗಳಾದ "ಕಾರ್ಪಣ್ಯದೋಷೋಪಹತಸ್ವಭಾವಃ" "ಉಪದ್ರಷ್ಟಾನುಮಂತಾ ಚ ಭಕ್ತಾ ಭೋಕ್ತಾ ಮಹೇಶ್ವರಃ" 'ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಂ' 'ಯದ್ಯದ್ವಿಭೂತಿ ಮತ್ಸತ್ತ್ವಂ ಶ್ರೀಮದೂರ್ಜಿತಮೇವವಾ' ಇತ್ಯಾದಿ ರಹಸ್ಯಾರ್ಥಗಳನ್ನು ಅಳವಡಿಸಲಾಗಿದೆ. ಒಟ್ಟಿನಲ್ಲಿ ಪರನೂ, ಪರಾತ್ಪರನೂ, ಸ್ವಾಮಿಯೂ ಆದ ಪರಮಾತ್ಮನು ಚೇತನರಿಗೆ ಶ್ರೇಯಸ್ಸನ್ನುಂಟುಮಾಡಲು ಸಮರ್ಥನು ಮತ್ತು ಸರ್ವಶಕ್ತನು ಎಂದು ಕುಲಶೇಖರರು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದ್ದಾರೆ.

ಕುಲಶೇಖರ ಆಳ್ವಾರರು ತಿರುಪತಿ ವೆಂಕಟೇಶ್ವರ ಸ್ವಾಮಿಯ ದರ್ಶನಮಾಡಿ ಆನಂದಭರಿತರಾದಾಗ, 'ಹೇ! ಶ್ರೀನಿವಾಸಾ! ವೆಂಕಟಾಚಲಪತಿ ಸ್ವಾಮಿಯೇ, ನಿನ್ನ ಈ ದಿವ್ಯ ಸನ್ನಿಧಿಯಲ್ಲಿ ಒಂದು ಮೀನಾಗಿ, ಆನೆಯಾಗಿ, ಹಕ್ಕಿಯಾಗಿ, ಕೊನೆಗೆ ಒಂದು ಬಂಡೆಯಾಗಿ ಸದಾ ನಿನ್ನ ದರ್ಶನ ಮಾಡುವ ಭಾಗ್ಯವನ್ನು ಕರುಣಿಸು' ಎಂದು ಪ್ರಾರ್ಥಿಸಿದ್ದಾರೆ. ಇದು ಅವರ ಭಕ್ತಿಯ ಅತಿಶಯದ ಪರಮಾವಧಿರೂಪವನ್ನು ವ್ಯಕ್ತಪಡಿಸುತ್ತದೆ.

ಪರಮಭಕ್ತರಾದ ಕುಲಶೇಖರ ಆಳ್ವಾರರು,

12ನೇ ಪುಟ ನೋಡಿ)

# ನವಗ್ರಹಕೃತಿಗಳು ದೀಕ್ಷಿತರು

ಆಕಾಶದಲ್ಲಿ ಅನಂತ ನಕ್ಷತ್ರ ರಾಶಿಗಳು ಕಾಣುತ್ತವೆ. ಅವುಗಳಲ್ಲಿ ಕೆಲವು ಗ್ರಹಗಳು. ಮನುಷ್ಯನ ಜೀವನದ ಮೇಲೆ ನಕ್ಷತ್ರಗಳು, ಗ್ರಹಗಳ ಪ್ರಭಾವ ತಪ್ಪದೇ ಉಂಟು. ಗ್ರಹ ಸಂಚಾರಗಳಿಂದ ಔನ್ನತ್ಯಪತನಗಳು ಆಗುವುದುಂಟು. ಆದ್ದರಿಂದ ಗ್ರಹಗಳನ್ನು ಸ್ತುತಿಸುವುದು ಅನಿವಾರ್ಯ ಕಾರ್ಯ. ಕೀರ್ತನಕಾರರಲ್ಲಿ ಗ್ರಹ ಸ್ತೋತ್ರಗಳು ಕಾಣುತ್ತವೆ.

ದಾಸರ ಕೂಟದಲ್ಲಿ ಕನಕದಾಸರಿಗೆ ಪ್ರತ್ಯೇಕ ಸ್ಥಾನ. ಅವರಿಗೆ ಭುಜಬಲ, ಧನಬಲ, ರಾಜ್ಯಬಲ, ಪ್ರಜಾಬಲವು ಉಂಟು. ಆದರೂ ಅವುಗಳೆಲ್ಲ ವ್ಯರ್ಥವಾಯಿತು. ಆದ್ದರಿಂದ ಆ ದಾಸರು

ಅವಬಲ ಬಲವಿದ್ದರೇನು ವಾಸು
ದೇವನಾ ಬಲವು ನಿಜವಾಗಿ ಇರದನಕ

ಎಂದು ಅನುಭವದಿಂದ ಹಾಡಿದರು.

ಅನ್ನಮಾಚಾರ್ಯರು ಆಂಧ್ರಕೀರ್ತನಕಾರರಲ್ಲಿ ಪ್ರಸಿದ್ಧರು. 32 ಸಾವಿರ ಕೀರ್ತನೆಗಳನ್ನು ಹಾಡಿದವರು. ಕನ್ನಡ ಹರಿದಾಸರಂತೆ ಆ ಪದ ಕವಿತಾಪಿತಾಮಹರು

ಕನುಗೊನು ನೀ ವಿಗ್ರಹಮೇ
ಗ್ರಹಬಲಮಿದೆ ನಾಕು

ನಿನ್ನ ನೋಡುವುದೇ ನನಗೆ ಗ್ರಹಬಲವೆಂದು ವಿಶ್ವಾಸದಿಂದ ಹಾಡಿದ್ದಾರೆ. ಇದೇ ರೀತಿಯಲ್ಲಿ ತ್ಯಾಗರಾಜರು

ಗ್ರಹಬಲಮೇಮಿ
ಶ್ರೀರಾಮಾನುಗ್ರಹ ಬಲಮೇ ಬಲಮು
ಗ್ರಹಬಲಮೇಮಿ ತೇಜೋಮಯ ವಿ
ಗ್ರಹಮುನು ಧ್ಯಾನಿಂಚೇವಾರಿಕಿ–ನವ

ರಾಮಾನುಗ್ರಹವಿದ್ದರೆ ನವಗ್ರಹ ಪೀಡೆಗಳಿಲ್ಲವೆಂದು ಹೇಳಿದ್ದಾರೆ. ಭದ್ರಾಚಲರಾಮದಾಸರು ತಮ್ಮ ಕೀರ್ತನಗಳಲ್ಲಿ ಗ್ರಹಪೀಡೆಗಳಿಗೆ ಅಂಜುವುದಿಲ್ಲವೆಂದು ಸ್ಪಷ್ಟಮಾಡಿದ್ದಾರೆ.

ಗ್ರಹ ಗತುಲಕು ವೆರುವಬೋಮು ಮಾಕು
ಗಲದು ದೈವಾನುಗ್ರಹಬಲಮು

ಕೀರ್ತನಕಾರರಲ್ಲಿ ಮುತ್ತುಸ್ವಾಮಿ ದೀಕ್ಷಿತರು ನವಗ್ರಹ ಕೀರ್ತನಗಳನ್ನು ರಚಿಸಿದ್ದಾರೆ. ಇದಕ್ಕೆ ಕಾರಣವೇನೆಂದು ಆಲೋಚಿಸಬಹುದು. ವೈಷ್ಣವಮತದಲ್ಲಿ ವಿಷ್ಣುವೊಬ್ಬನೇ ಪುರುಷೋತ್ತಮ. ಸಕಲ ಜೀವರಾಶಿಗಳಲ್ಲಿ ಸರ್ವೋತ್ತಮ. ಅವನ ನಂಬಿದವರಿಗೆ ಗ್ರಹಗಳು ಏನೂ ಮಾಡುವುದಿಲ್ಲ. ಗ್ರಹಗಳು ಅವನ ಅಧೀನ, ಸ್ವತಂತ್ರವಲ್ಲ. ಈ ಅಭಿಪ್ರಾಯ ಕಾರಣದಿಂದ ಪುರಂದರದಾಸರು, ಕನಕದಾಸರು, ಅನ್ನಮಾಚಾರ್ಯರು ತ್ಯಾಗರಾಜರು ಗ್ರಹಗಳನ್ನು ಪ್ರತ್ಯೇಕವಾಗಿ ಹಾಡಿದವರಲ್ಲ. ಆದರೆ ದೀಕ್ಷಿತರವರು ಅದ್ವೈತಿ. ಅವರಿಗೆ ಮಂತ್ರ ಶಾಸ್ತ್ರಪ್ರಾವೀಣ್ಯ ಹೆಚ್ಚು. ಮತ್ತು ಜ್ಯೋತಿಷ್ಯದಲ್ಲಿ ಅವರಿಗೆ ಅಸಮಾನ ಜ್ಞಾನ. ಆದ್ದರಿಂದ ಅವರು ನವಗ್ರಹಕೃತಿಗಳು ಹಾಡಿದ್ದಾರೆ.

ಡಾ॥ ಕೆ. ಸರ್ವೋತ್ತಮರಾವ್

ತಿರುವಾರೂರು ದೇವಸ್ಥಾನದ ಪ್ರಾಕಾರದಲ್ಲಿ ನವಗ್ರಹಗಳು ಕಾಣುತ್ತವೆ. ಆದರೆ ಅವು ಒಂದೇ ಸಾಲಿನಲ್ಲಿ ಇರುವುದು ವಿಶೇಷ. ಆ ಪ್ರತಿಮೆಗಳು ಆಕರ್ಷಣೀಯವಾಗಿ ದರ್ಶನ ಕೊಡುತ್ತವೆ. ಆದ್ದರಿಂದ ದೀಕ್ಷಿತರವರು ನವಗ್ರಹಕೃತಿಗಳು ಹಾಡಿದರೆಂದು ಐತಿಹ್ಯ. ಅವುಗಳ ಕ್ರಮ–

ಸೂರ್ಯಮೂರ್ತೇ ನಮೋಽಸ್ತು ತೇ
ಸುಂದರಚ್ಛಾಯಾಧಿಪತೇ
ಚಂದ್ರಂ ಭಜ ಮಾನಸ
ಸಾಧು ಹೃದಯ ಸದೃಶಮ್
ಅಂಗಾರಕ ಮಾಶ್ರಯಾಮಿ
ವಿನತಾಶ್ರಯ ಜನ ಮಂದಾರಮ್
ಬುಧ ಮಾಶ್ರಯಾಮಿ ಸತತಂ
ಸುರವಿನುತಂ ಚಂದ್ರತಾರಾಸುತಮ್
ಬೃಹಸ್ಪತೇ ತಾರಾಪತೇ
ಬ್ರಹ್ಮಜಾತೇ ನಮೋಽಸ್ತು ತೇ
ಶ್ರೀ ಶುಕ್ರ ಭಗವಂತಂ
ಚಿಂತಯಾಮಿ ಸತತಂ
ದಿವಾಕರ ತನೂಜಂ ಶನೈಶ್ಚರಂ
ಸ್ಮರಾಮ್ಯಹಂ ಸದಾ ರಾಹುಂ
ಮಹಾಶೂರಂ ಕೇತು ಮಹಂ
ಭಜಾಮಿ ಛಾಯಾಗ್ರಹ ವರಂ

ಈ ನವಗ್ರಹ ಕೀರ್ತನೆಗಳಲ್ಲಿ ವಿಶೇಷಾಂಶಗಳು ಕಾಣುತ್ತವೆ. ಸೂರ್ಯಗ್ರಹ ಕೀರ್ತನೆಯಲ್ಲಿ ಆವಾಹನೆ, ಧ್ಯಾನ, ಆತ್ಮಾರ್ಪಣಾದಿ ಅಂಶಗಳು ಉಂಟು. ಮತ್ತು ಸೂರ್ಯಮೂರ್ತಿಯನ್ನು ನಾರಾಯಣರೂಪನಾಗಿ ಹೊಗಳಿದ್ದಾರೆ.

"ಭಾರತೀಶ ಹರಿಹರಾತ್ಮನೇ"

ಪ್ರಾತಃ ಕಾಲದಲ್ಲಿ ಬ್ರಹ್ಮಸ್ವರೂಪನಾಗಿ,

ಪುರಂದರದಾಸರು ಸೂರ್ಯಾದಿ ಬಲಗಳು ಹರಿಬಲಕ್ಕೆ ಸಮಾನವಿಲ್ಲವೆಂದು ಭಾವಿಸುತ್ತಾರೆ.

ಬಲವು ಬಲವೇ ನಿನ್ನ ಬಲವಲ್ಲವೆ ಮಿಕ್ಕ
ಬಲಗಳುಂಟೆ ಬಣಗು ಗ್ರಹಗಳಿಂದ
ಹರಿ ನಿನ್ನ ಕೃಪೆ ಎನಗೆ ಚಂದ್ರತಾರಾಬಲವು
ಹರಿ ನಿನ್ನ ಕರುಣವೇ ರವಿಯ ಬಲವು
ಹರಿ ನಿನ್ನ ಮೋಹವೇ ಎನಗೆ ಗುರುಭೃಗು ಬಲವು
ಹರಿ ನಿನ್ನ ಬಲುಮೆಯೇ ಶನಿಯ ಬಲವು
ಮಂಗಳ ಮಹಿಮ ನಿನ್ನ ಅಂಗದರುಶನ ಸುಖದ
ಮಂಗಳನ ಬಲವು ಎನ್ನಂಗಕೆ ಸದಾ
ರಂಗ ನಿನ್ನಯ ಚರಣ ಕಂಗಳಲಿ ನೋಡುವುದು
ಹಿಂಗದ ಸುಖನೀವ ಸೌಮ್ಯಬಲವಯ್ಯ
ಆದಿ ಮೂರುತಿ ನಿನ್ನನರಿವುದೇ ರಾಹುಬಲ
ಆದಿ ಮೂಲನೆ ನಿನ್ನ ಗುಣಕಥನವ
ಆದರಿಸಿ ಕೊಂಡಾಡುತಿಹುದೆನಗೆ ಕೇತುಬಲ
ಆದಿ ಮಹಿಮನೆ ಪುರಂದರವಿಠಲ

ಮಧ್ಯಾಹ್ನದಲ್ಲಿ ಹರನಾಗಿ, ಸಾಯಂಸಮಯದಲ್ಲಿ ವಿಷ್ಣುವಾಗಿ ಸೂರ್ಯ ಪ್ರಕಾಶಿಸುತ್ತಾನೆ. ಇದೇ ಅಭಿಪ್ರಾಯವನ್ನು 'ಭಾರತೀಶ ಹರಿಹರಾತ್ಮನೇ' ಎಂದು ಹಾಡಿದ್ದಾರೆ. ಚಂದ್ರಗ್ರಹವನ್ನು 'ಶಂಕರ ಮೌಳಿ ಭೂಷಣಂ, ವೆಂಕಟೇಶ ಸಹಜಂ' ಎಂದು ಸಮದೃಷ್ಟಿಯಿಂದ ಪೂಜಿಸಿದ್ದಾರೆ. ಅಂಗಾರಕ ಗ್ರಹವನ್ನು 'ದಾನವಸುರಸೇವಿತ'ನೆಂದು ಆಗ್ರಹದ ಪ್ರತ್ಯೇಕತೆಯನ್ನು ಸೂಚಿಸಿದ್ದಾರೆ. ಶುಕ್ರ ಗ್ರಹವನ್ನು ಭಗವಂತನೆಂದು ಪೂಜಿಸಿದ್ದಾರೆ. ಶನಿ ಪೀಡೆಯಿಂದ ತಪ್ಪುವುದು ಕಷ್ಟವೆಂದು 'ಧೀರತರಂ ಸಂತತಂ ಚಿಂತಯೇಹಂ'–ಎಂದು ಭಕ್ತಿಯಿಂದ ಭಯದಿಂದ ಪ್ರಾರ್ಥನೆ ಮಾಡಿದ್ದಾರೆ.

ಆಯಾಗ್ರಹಗಳ ರಾಶ್ಯಾಧಿಪತಿಗಳನ್ನು ಹೇಳುವುದು ಮತ್ತೊಂದು ವಿಶೇಷ. ಸೂರ್ಯ ಮೂರ್ತೇ– ಸಿಂಹರಾಶ್ಯಾಧಿಪತೇ, ಅಂಗಾರಕಂ ಮೇಷ ವೃಶ್ಚಿಕ ರಾಶ್ಯಾಧಿಪತಿಂ, ಬುಧಂ–ಮಿಥುನ ಕನ್ಯಾಧಿಪಂ, ಬೃಹಸ್ಪತೇ–ಧನುರ್ಮೀನಾಧಿಪತೇ, ಶ್ರೀಶುಕ್ರಭಗವಂತಂ – ವೃಷ ತುಲಾಧೀಶಂ' ದಿವಾಕರತನೂಜಮ್' – ಮಕರ ಕುಂಭರಾಶಿ ನಾಥಮ್' ಎಂದು ತಮ್ಮ ಜ್ಯೋತಿಶ್ಶಾಸ್ತ್ರ ಪರಿಜ್ಞಾನವನ್ನು ಸ್ಪಷ್ಟಪಡಿಸಿದ್ದಾರೆ.

ಗ್ರಹಗಳ ಆಕಾರವನ್ನು ವರ್ಣಿಸುವುದು ಮತ್ತೊಂದು ವಿಶೇಷ. ಸೂರ್ಯ 'ಸುಂದರ ಮೂರ್ತಿ'. ಚಂದ್ರನಿಗೆ ಚತುರ್ಭುಜ. ಅಂಗಾರಕನು ರಕ್ತನೇತ್ರ ಉಳ್ಳವನು. ಬುಧನು ಕುಂಕುಮವರ್ಣ ದೇಹಕಾಂತಿ ಉಳ್ಳವನು. ಬೃಹಸ್ಪತಿ ಮಹಾಬಲವಂತನು. ಶುಕ್ರನು ಧವಳ ಗಾತ್ರ ಉಳ್ಳವನು. ಶನಿ ಕಾಲಾಂಜನ ಕಾಂತಿ ಯುಕ್ತ ದೇಹ ಉಳ್ಳವನು. ರಾಹುಗೆ ಕರಾಳ ವದನ. ಕೇತುಗೆ ಮಂಗಳವಸ್ತ್ರವೆಂದರೆ ಪ್ರೀತಿ.

ಗ್ರಹಗಳ ಗುಣಗಳನ್ನು ವಿವರಿಸುವುದು ಮತ್ತೊಂದು ವಿಶೇಷ. ನಾವು ಮಾಡುವ ಕರ್ಮಗಳಿಗೆ ಸೂರ್ಯ ಸಾಕ್ಷಿ. ಅಂಗಾರಕನು ಸಮಸ್ತ ಮಂಗಳವನ್ನು ಕೊಡುವವನು. ಬುಧನು ಸಂಪದಗಳನ್ನು, ಕವಿತಾಶಕ್ತಿಯನ್ನು ಪ್ರದಾನಮಾಡುತ್ತಾನೆ. ಬೃಹಸ್ಪತಿ ಪುತ್ರಕಾರಕನು. ಶುಕ್ರನು ಕಳತ್ರಕಾರಕನು. ಶನಿ ಕಷ್ಟಗಳನ್ನು ಕೊಟ್ಟರೂ ಶುಭಗಳನ್ನು ಪ್ರಸಾದಿಸುತ್ತಾನೆ.

ಪುರಾಣೇತಿಹಾಸಗಳಲ್ಲಿ ಪ್ರಸ್ತಾಪಿಸಿದ ವೃತ್ತಾಂತಗಳನ್ನು ಹೇಳುವುದು ಮತ್ತೊಂದು ವಿಶೇಷ. ಚಂದ್ರಸ್ತುತಿಯಲ್ಲಿ 'ಗೀಷ್ಪತಿ ಶಾಪಾನುಗ್ರಹ ಪಾತ್ರಂ' ಎಂದು ಸಮಾಸವಿದೆ. ಈ ಸಮಾಸದಿಂದ ತಾರಾಶಶಾಂಕ ವೃತ್ತಾಂತವು ಅಭಿವ್ಯಕ್ತವಾಗುತ್ತದೆ. ಶುಕ್ರಸ್ತುತಿಯಲ್ಲಿ 'ದೈತ್ಯ ಹಿತೋಪದೇಶ ಕೇಶವ ಕಟಾಕ್ಷೈಕ ನೇತ್ರಂ' ಎಂದು ಸಮಾಸವಿದೆ. ಈ ಸಮಾಸದಿಂದ ವಾಮನಾವತಾರದಲ್ಲಿ ಬಲಿಚಕ್ರವರ್ತಿ ವಾಮನನಿಗೆ ದಾನ ಕೊಡುವ ಸಮಯದಲ್ಲಿ ಶುಕ್ರನು ಕಮಂಡಲದಲ್ಲಿ ಪ್ರವಾಹಕ್ಕೆ ಅಡ್ಡವಾಗಿ ನಿಂತು ವಾಮನ ಕುಶದಿಂದ ಏಕಾಕ್ಷಿಯಾದ ವೃತ್ತಾಂತವು ವ್ಯಕ್ತವಾಗುತ್ತದೆ.

ಗ್ರಹಗಳಿಗೆ ಇಷ್ಟವಾದ ವಸ್ತುಗಳನ್ನು ಹೇಳುವುದು ಮತ್ತೊಂದು ವಿಶೇಷ. ಉದಾಹರಣೆಗೆ ಶನಿದೇವರಿಗೆ ತಿಲತೈಲ ಮಿಶ್ರಿತಾನ್ನವು ಇಷ್ಟ. ಗೋಮೇಧಿಕವನ್ನು ಧರಿಸುವುದು ರಾಹುಗ್ರಹಕ್ಕೆ ಪ್ರೀತಿಯಾದ ಅಂಶ.

ಇವಲ್ಲದೆ ಒಂದೊಂದು ಗ್ರಹಕ್ಕೆ ಯಾರು ಮಿತ್ರರೋ ದೀಕ್ಷಿತರವರು ಹೇಳುತ್ತಾರೆ. ಉದಾಹರಣೆಗೆ ಅಂಗಾರಕನಿಗೆ ಭಾನು ಚಂದ್ರ ಗುರು ಗ್ರಹಗಳು ಮಿತ್ರರು. ರಾಹುಗೆ ಶನಿ ಶುಕ್ರರು ಸ್ನೇಹಿತರು.

---

ಮನುಷ್ಯನ ಜೀವನ ಕಾಲದಲ್ಲಿ ಶನಿಪೀಡೆ ತಪ್ಪದೇ ಬರುತ್ತದೆ. ದ್ರೌಪದಿ ವಿರಾಟನಗರದಲ್ಲಿ ಶನಿದೇವರನ್ನು ಪೂಜಿಸಿ ಕಷ್ಟಗಳಿಂದ ವಿಮುಕ್ತಳಾದಳೆಂದು ಐತಿಹ್ಯ. ಈ ಅಂಶವನ್ನೇ ದೀಕ್ಷಿತರು 'ಮಾಲಿನೀ ವಿನುತ ಗುರುಗುಹ ಮುದಿತಂ' ಎಂದು ಹಾಡಿದ್ದಾರೆ. ಲೋಕೋಪಕಾರಕವಾಗಿ ದೀಕ್ಷಿತರು ಹಾಡಿದ ಶನಿಸ್ತೋತ್ರವನ್ನು ಜನರು ಪಠಿಸಿ ಧನ್ಯರಾಗುತ್ತಾರೆ.

ರಾಗ – ಯದುಕುಲ ಕಾಂಭೋಜಿ — ತಾಳ – ಆದಿ

ದಿವಾಕರ ತನೂಜಂ ಶನೈಶ್ಚರಂ
ಧೀರತರಂ ಸಂತತಂ ಚಿಂತಯೇಹಂ ॥ ಪ ॥

ಭವಾಂಬುನಿಧೌ ನಿಮಗ್ನ ಜನಾನಾಂ
ಭಯಂಕರಂ ಅತಿ ಕ್ರೂರ ಫಲದಂ
ಭವಾನೀಶ ಕಟಾಕ್ಷಪಾತ್ರ ಭೂತ
ಭಕ್ತಿಮತಾ ಮತಿಶಯ ಶುಭಫಲದಂ ॥ ಅ ಪ. ॥

ಕಾಲಾಂಜನ ಕಾಂತಿಯುಕ್ತದೇಹಂ
ಕಾಲ ಸಹೋದರಂ ಕಾಕವಾಹನಂ
ನೀಲಾಂಶುಕ ಪುಷ್ಪಮಾಲಾಲಂಕೃತಂ
ನೀಲರತ್ನ ಭೂಷಣಾಲಂಕೃತಂ ॥ 1 ॥

ಮಾಲಿನೀ ವಿನುತ ಗುರುಗುಹಮುದಿತಂ
ಮಕರ ಕುಂಭರಾಶಿನಾಥಂ–ತಿಲತೈಲ
ಮಿಶ್ರಿತಾನ್ನ ದೀಪ ಪ್ರಿಯಂ
ದಯಾಸುಧಾ ಸಾಗರಂ–ನಿರ್ಭಯಂ ॥ 2 ॥

ಕಾಲದಂಡ ಪರಿಪೀಡಿತ ಜಾನುಂ
ಕಾಮಿತಾರ್ಥ ಫಲದ ಕಾಮಧೇನುಂ
ಕಾಲಚಕ್ರ ಭೇದ ಚಿತ್ರಭಾನುಂ
ಕಲ್ಪಿತ ಛಾಯಾದೇವೀ ಸೂನುಂ ॥ 3 ॥

---

(10ನೇ ಪುಟದಿಂದ)

ತಮ್ಮ ಯಾತ್ರಾಪ್ರವಾಸದಿಂದ ಪೂರ್ಣತೃಪ್ತಿ ಹೊಂದಿದರು. ಸದಾಭಗವದ್ಭಕ್ತರ ಸಹವಾಸದಲ್ಲಿದ್ದು, ಪವಿತ್ರ ಗ್ರಂಥಕಾಲಕ್ಷೇಪ, ಪುರಾಣ ಶ್ರವಣ, ಹರಿಕಥಾಕಾಲಕ್ಷೇಪ ಇತ್ಯಾದಿ ಧರ್ಮ ಕಾರ್ಯಗಳಲ್ಲಿ ನಿರತರಾಗಿರುತ್ತಿದ್ದರು. ತಮ್ಮ ಪುತ್ರ ಎರಡನೆ ದೃಢವ್ರತನಿಗೆ ರಾಜ್ಯಾಭಿಷೇಕ ಮಾಡಿದರು. ಆಳ್ವಾರ್ ತಿರುನಗರಿ ಬಳಿ ಇರುವ ಬ್ರಹ್ಮದೇಶದಲ್ಲಿ ನೆಲಸಿ, ಅಲ್ಲಿನ ರಾಜಗೋಪಾಲ ಸ್ವಾಮಿಯನ್ನು ಆರಾಧಿಸುತ್ತ ಮುಕುಂದನ ದಿವ್ಯ ವಾಣಿಯನ್ನು ಸದಾ ಸ್ಮರಿಸುತ್ತಿದ್ದರು. ತಮ್ಮ ಅರವತ್ತೇಳನೆಯ ವಯಸ್ಸಿನಲ್ಲಿ ಪರಮಪದವನ್ನು ಸೇರಿ ಶ್ರೀ ವೈಕುಂಠದಲ್ಲಿರುವ ಶ್ರೀಕೃಷ್ಣನ ನಿತ್ಯ ಕೈಂಕರ್ಯ ಮಾಡಲು ತೆರಳಿದರು.

ಭಗವದ್ಗೀತಾವಾಕ್ಯದಂತೆ, ಯಾರು ಕುಲಶೇಖರಾಳ್ವಾರರ ಚರಿತ್ರೆಯನ್ನು ತಿಳಿದು, ಅವರು ರಚಿಸಿರುವ ಮುಕುಂದಮಾಲಾಸ್ತೋತ್ರ, ಪೆರುಮಾಳ್ ತಿರುಮೊಳಿಯನ್ನು ಅನುಸಂಧಾನಮಾಡುವರೋ, ಅವರಿಗೆ ಮುಕುಂದನು ಇಹದಲ್ಲಿ ಐಶ್ವರ್ಯವನ್ನೂ, ಪರದಲ್ಲಿ ಮೋಕ್ಷವನ್ನೂ ತಪ್ಪದೆ ಕರುಣಿಸುವನು.

ಅಲಮಲಮಧಿಕಂ ವಾ ಪ್ರಾಣಿನಾಂ
ಪಾತಕಾನಾಂ ನಿರಸನವಿಷಯೇ
ಶ್ರೀಕೃಷ್ಣ ಕೃಷ್ಣೇತಿ ವಾಣೀ।
ಯದಿ ಭವತಿ ಮುಕುಂದೇಹಿ ಭಕ್ತಿ
ರಾನಂದ ಸಾಂದ್ರೇ ಕರತಲಕಲಿತಾ
ಸಾಮೋಕ್ಷಸಾಮ್ರಾಜ್ಯಲಕ್ಷ್ಮೀಃ॥

ಲೋಕದ ಸಮಸ್ತ ಜೀವರಾಶಿಗಳ ಪಾಪ ಪರಿಹಾರಕ್ಕೆ ಶ್ರೀ ಕೃಷ್ಣ, ಕೃಷ್ಣ ನಾಮ ಉಚ್ಚಾರಣೆಯೇ ಸಾಕು. ಅದರ ಮಹಿಮೆ ಅದ್ವಿತೀಯ. ಪರಮಾನಂದಕರನೂ, ಮೋಕ್ಷಪ್ರದನೂ ಆದ ಮುಕುಂದನಲ್ಲಿ ಭಕ್ತಿನೆಲಸಿದರೆ, ಅಂತಹವರ ಅಂಗೈಯಲ್ಲಿ ಮೋಕ್ಷಸಾಮ್ರಾಜ್ಯ ಲಕ್ಷ್ಮಿಯು ಶಾಶ್ವತವಾಗಿ ನೆಲೆಸುವಳು. ✿

# ಸರ್ವಮೂಲಗ್ರಂಥಗಳು

ಶ್ರೀಮನ್ ಮಧ್ವಾಚಾರ್ಯರವರ ಹೆಸರನ್ನು ಕೇಳದ ಆಸ್ತಿಕ ವರ್ಗದ ಭಾರತೀಯನಿಲ್ಲ. ಇವರು ಸಾಕ್ಷಾತ್ ವಾಯುದೇವರ ಅವತಾರ. ಇವರು ತ್ರೇತಾಯುಗದಲ್ಲಿ ಹನುಮಂತನಾಗಿಯೂ ದ್ವಾಪರದಲ್ಲಿ ಭೀಮಸೇನರಾಗಿಯೂ ಅವತರಿಸಿ ಅತಿಮಾನವ ಕಾರ್ಯವೆಸಗಿ ದೈತ್ಯರನ್ನು ನಿಗ್ರಹಿಸಿದ್ದೂ ಅಲ್ಲದೆ, ಸಾತ್ತ್ವಿಕಸಮುದಾಯವನ್ನು ಉದ್ಧರಿಸಲು ಶ್ರೀಮನ್ ಮಧ್ವಾಚಾರ್ಯರಾಗಿ ಅವತರಿಸಿ ಶಾಸ್ತ್ರ ಸಮ್ಮತವಾದ, ಹಾಗೂ ವೇದ ಸಮ್ಮತವಾದ, ನೈಜತತ್ತ್ವಜ್ಞಾನ ಬೋಧಿಸಲೋಸುಗ 37 ಪವಿತ್ರ ಗ್ರಂಥಗಳನ್ನು ರಚಿಸಿ, ಮಹತ್ವಪೂರ್ಣಜ್ಞಾನ ಕಾರ್ಯವನ್ನೆಸಗಿ ವೇದೋಕ್ತ ಗುರುಗಳೆನಿಸಿವರು ಎಂಬುದಕ್ಕೆ ಬಳಿತ್ಥಾಸೂಕ್ತ ಹಾಗೂ ಪವಮಾನ ಗ್ರಂಥಗಳೇ ಆಧಾರವಾಗಿವೆ. ಯತಿಗಳ ಮಹತ್ತ್ವವನ್ನು ಅಳಿಯುವ ಮಾನದಂಡ ಅವರೆಸಗಿದ ಜ್ಞಾನಕಾರ್ಯ ದಿಂದಲಾದಕಾರಣ ಶ್ರೀಮಧ್ವರ ಆ ಸರ್ವ ಮೂಲಗ್ರಂಥಗಳ ಸೂಕ್ಷ್ಮಪರಿಚಯವನ್ನು ಈಗ ಗಮನಿಸೋಣ.

ಸರ್ವಮೂಲಗ್ರಂಥ:

ಮಧ್ವರಿಂದ ರಚಿತವಾದ ಸರ್ವಮೂಲ ಗ್ರಂಥಗಳ ಸಂಖ್ಯೆ 37. ಇದನ್ನು ಪುರಂದರದಾಸರು ತನ್ನದೊಂದು ಕೃತಿಯಲ್ಲಿ 'ಶ್ರೀತತ್ತ್ವವಾದ ಮತವ.........ಮೂವತ್ತೇಳು ಗ್ರಂಥಗಳ ರಚಿಸಿದ ಅಲವಬೋಧರ ಭಜಿಸಿರಯ್ಯಾ' ಎಂದೂ ವ್ಯಾಸರಾಯರು ತಮ್ಮದೊಂದು ಕನ್ನಡ ಕೃತಿಯಲ್ಲಿ "ಆರಾರು ಮೇಲೊಂದು ಅಧಿಕ ಸಂಖ್ಯೆಯ ಗ್ರಂಥರಚಿಸಿ" ಎಂದು ತಿಳಿಸಿರುವುದೂ ಅಲ್ಲದೆ "ಗ್ರಂಥರತ್ನಮಾಲಿಕಾ" ಎಂಬ ಒಂದು ಪ್ರತ್ಯೇಕ ಗ್ರಂಥವನ್ನೇ ರಚಿಸುತ್ತಾ ಅದರಲ್ಲಿ ಶ್ರೀಮದ್ವಾಚಾರ್ಯರ ಸರ್ವಮೂಲಗ್ರಂಥಗಳಾದ 37ರ ಹೆಸರುಗಳನ್ನು ಉಲ್ಲೇಖಿಸಿರುತ್ತಾರೆ. ಗೋಪಾಲದಾಸರೂ ಕೂಡ ತಮ್ಮದೊಂದು ಕೃತಿಯಲ್ಲಿ ಶ್ರೀಮಧ್ವಾಚಾರ್ಯರ ಸರ್ವಮೂಲ ಗ್ರಂಥಗಳ ನಾಮವನ್ನು

ದಶಉಪನಿಷತುಗಳಿಗೆ ಟೀಕೆಯನು ಮಾಡಿ
ಪೊಸಗೀತಾಭಾಷ್ಯಋಗ್ಭಾಷ್ಯಾನುವೇದಾಂತ।
ಅಸಮ ತಾತ್ಪರ್ಯ ನಿರ್ಣಯ
ದ್ವಾದಶಸ್ತೋತ್ರ
ಕುಶಲದಿ ಯಮಕ ಭಾರತ ಗ್ರಂಥಗಳಮಾಡಿ"

—ಇತ್ಯಾದಿ ಸ್ಪಷ್ಟಪಡಿಸಿರುತ್ತಾರೆ. ಶ್ರೀಮಧ್ವಾಚಾರ್ಯರ ಗ್ರಂಥ ವೈಶಿಷ್ಟ್ಯ ಎಂದರೆ ತಮ್ಮ ಗ್ರಂಥದ ಪ್ರತಿಹಂತದಲ್ಲೂ ಇತಿಪಾದ್ಮ, ಗಾರುಡಿ, ಸ್ಕಾಂದೇ, ಇತ್ಯಾದಿ ರೀತ್ಯ ಸೂಚಿಸುತ್ತಾ ತಾವು ಕೇವಲ ವಿಷಯಗಳಿಗೆ ಸಂಬಂಧಿಸಿದ ಶಾಸ್ತ್ರವಾಕ್ಯಗಳನ್ನು ಎಲ್ಲಾ ಗ್ರಂಥಗಳಿಂದ ಸಮಯೋಚಿತವಾಗಿ ಆಯ್ದು ಜೋಡಿಸಿರುವುದಾಗಿಯೂ ಎಲ್ಲೂ ತಮ್ಮ ಸ್ವಂತ ಮಾತುಗಳನ್ನು ಅಶಾಸ್ತ್ರೀಯವಾಗಿ ಉಪಯೋಗಿಸಿಲ್ಲವೆಂದೂ ಸ್ಪಷ್ಟಪಡಿಸಿರುವುದು. ಅದ್ದರಿಂದ ಶ್ರೀಮಧ್ವಾಚಾರ್ಯರ ಯಾವುದಾದರೊಂದು ವಾಕ್ಯ ಸರಿಯಲ್ಲ ಎಂದರೆ ಅದು ಶಾಸ್ತ್ರ ಸರಿಯಲ್ಲ ಎಂದಂತಾಗುವುದೆಂಬುದನ್ನು ಇಲ್ಲಿ ಗಮನಿಸ ಬಹುದಾಗಿದೆ.

## ವೇದಪ್ರಸ್ಥಾನ

ಋಗ್ಭಾಷ್ಯ:

ಶ್ರೀಮಧ್ವಾಚಾರ್ಯರು ಈ ಋಗ್ಭಾಷ್ಯ ಗ್ರಂಥದಲ್ಲಿ ವೇದಗಳ ಸಕಲವರ್ಣಗಳೂ ಪದಗಳೂ ಹಾಗೂ ವಾಕ್ಯಗಳೆಲ್ಲವೂ ಪರಮಾತ್ಮನಾದ ಶ್ರೀಹರಿಯ ಸರ್ವೋತ್ತಮತ್ವ ಪ್ರತಿಪಾದಕವಾದುದೆಂಬುದನ್ನು ಸ್ಪಷ್ಟಪಡಿಸಿರುತ್ತಾರೆ. ವೇದವಾಕ್ಯಗಳಲ್ಲಿ ಏನಾದರೂ ಆಪಾತತಃ ವಿರೋಧವು ಸ್ಥೂಲ ದೃಷ್ಟಿಯಿಂದ ಕಂಡು ಬರುವಂತಿದ್ದರೆ ಅವುಗಳಿಗೆ ಸರಿಯಾಗಿ ಪರಮಾತ್ಮನಲ್ಲೇ ಸಮನ್ವಯ ಮಾಡಬೇಕೆಂದು ತಿಳಿಸಿರುತ್ತಾರೆ. ಒಂದು ಗ್ರಂಥದಲ್ಲಿ ಎರಡಭಿಪ್ರಾಯ ಬರಬಾರದೆಂದು ಎಚ್ಚರಿಸಿದ್ದಾರೆ.

ಈಶಾವಾಸ್ಯೋಪನಿಷತ್ ಭಾಷ್ಯ:

ಇದರಲ್ಲಿ ಶ್ರೀಮಧ್ವಾಚಾರ್ಯರು ವಿಶ್ವವೆಲ್ಲಾ ಭಗವಂತನ ವ್ಯಾಪ್ತತೆಗೆ ಒಳಪಟ್ಟಿದೆ ಎಂದೂ ಜೀವಿಗಳಲ್ಲಿ ಪರಸ್ಪರ ಭೇದವಿರುವುದರಿಂದ ಫಲದಲ್ಲೂ ತಾರತಮ್ಯ ಉಂಟೆಂದೂ, ವೈರಾಗ್ಯವು ಅತ್ಯಾವಶ್ಯಕವಾದುದೆಂದೂ, ಜ್ಞಾನ ಸಂಪಾದಿಸಿದಲ್ಲಿ ಮೋಕ್ಷಸಿದ್ಧಿಸುವುದೆಂದೂ, ಜ್ಞಾನಿಗೂ ಕರ್ಮಬಿಟ್ಟಿದ್ದಲ್ಲ ಎಂದೂ ತಿಳಿಸುತ್ತಾ, ಯಾವ ಕಾಲಕ್ಕೂ ಮಿಥ್ಯಾಜ್ಞಾನ ಹಾನಿಕರವೆಂದು ಎಚ್ಚರಗೊಳಿಸಿರುತ್ತಾರೆ.

ತಲವಕಾರ ಉಪನಿಷತ್ ಭಾಷ್ಯ:

ಇದರಲ್ಲಿ ಶ್ರೀಮಧ್ವಾಚಾರ್ಯರು ಪರಮಾತ್ಮನು ಅನಂತ ಕಲ್ಯಾಣಗುಣ ಪರಿಪೂರ್ಣನೆಂದೂ, ಯಾವ ದೇವತೆಗಳಿಂದಲೂ ಸಾಕಲ್ಯೇನ ತಿಳಿಯಲ್ಪಡಲಾರದವನೆಂದೂ, ಆ ಹರಿಯ ಅನುಗ್ರಹವೇ ಅತ್ಯಂತ ಮುಖ್ಯವಾದುದೆಂದೂ ತಿಳಿಸುತ್ತಾ ಜೀವನಾದವನಿಗೆ ಯಾವ ಕಾಲದಲ್ಲೂ ಹರಿಯ ಸ್ಥಾನಮಾನಾದಿಗಳು ಲಭಿಸಲಾರದೆಂದೂ ಅಂತಹ ಉಪಾಸನೆ ಅಪಾಯಕಾರಿಯೆಂದು ಎಚ್ಚರಿಸಿದ್ದಾರೆ.

ಶ್ರೀ ಚಿಂಚೋಳಿ ಪ್ರಹ್ಲಾದಾಚಾರ್ಯ

ಅಥರ್ವಣೋಪನಿಷತ್ ಭಾಷ್ಯ:

ಇದರಲ್ಲಿ ಶ್ರೀಮಧ್ವಾಚಾರ್ಯರು ಪರಮಾತ್ಮನ ನೈಜ ತತ್ತ್ವಜ್ಞಾನದಿಂದ ಮೋಕ್ಷಪ್ರಾಪ್ತಿಯೆಂದೂ, ಬ್ರಹ್ಮನನ್ನು ತಿಳಿದವನು ಎಂದಿಗೂ ಬ್ರಹ್ಮನೇ ಆಗನೆಂದೂ ತಿಳಿಸುತ್ತ ಪರಮಾತ್ಮನ ಸರ್ವೋತ್ತಮತ್ವವನ್ನೂ ಜೀವನ ಪರಾಧೀನತೆಯನ್ನೂ, ತಿಳಿಸುತ್ತಾ ಜೀವೇಶ ಭೇದಪ್ರತಿಪಾದಿಸಿರುತ್ತಾರೆ.

ಮಾಂಡೂಕ್ಯೋಪನಿಷತ್ ಭಾಷ್ಯ:

ಇದರಲ್ಲಿ ಶ್ರೀಮಧ್ವಾಚಾರ್ಯರು "ಓಂ" ಕಾರಕ್ಕೆ ನಾಲ್ಕು ಅವಯವಗಳುಂಟೆಂದೂ ಅವಕ್ಕೆ ವಿಶ್ವ, ತೈಜಸ, ಪ್ರಾಜ್ಞ, ತುರ್ಯ ಎಂಬ ಭಗವದ್ರೂಪಗಳೆಂದೂ, ಅವು ಜೀವಿಗಳ ಜಾಗ್ರತೆ, ಸ್ವಪ್ನ ಸುಷುಪ್ತಿ ಮೋಕ್ಷಾದಿಗಳನ್ನು ನಿಯಂತ್ರಿಸುವುದರಿಂದ ಶ್ರೀಹರಿಯಾನುಗ್ರಹದಿಂದ ಮೋಕ್ಷಸಂಪಾದಿಸಬಹುದೆಂಬ ಅಂಶವನ್ನು ವಿಶದಪಡಿಸಿರುತ್ತಾರೆ.

ಷಟ್ ಪ್ರಶ್ನೋಪನಿಷತ್ ಭಾಷ್ಯ:

ಇದರಲ್ಲಿ ಶ್ರೀಮಧ್ವಾಚಾರ್ಯರು ಶ್ರೀಹರಿ ವಾಯುಗಳ ಮಹಿಮೆಯನ್ನು ಬಹುವಾಗಿ ವರ್ಣಿಸುತ್ತಾ, ಪರಮಾತ್ಮನು ಪ್ರಜಾಸೃಷ್ಟಿಗೆ ಮನಸ್ಸು ಮಾಡಿ ವಾಯುದೇವರಿಗೆ ಮುಂದಿನ ಕಾರ್ಯವನ್ನು ನಿಯೋಜಿಸಿರುವ ಬಗೆಯನ್ನು ತಿಳಿಸುತ್ತಾ ಶ್ರೀಹರಿ ವಾಯುಗಳ ಸರ್ವೋತ್ತಮ ಹಾಗೂ ಜೀವೋತ್ತಮ ಜ್ಞಾನದಿಂದ ಮೋಕ್ಷಸಿದ್ಧಿ ಎಂದು ಸ್ಪಷ್ಟಪಡಿಸಿರುತ್ತಾರೆ.

ಕಾಠಕೋಪನಿಷತ್ ಭಾಷ್ಯ:

ಇದರಲ್ಲಿ ಶ್ರೀಮಧ್ವಾಚಾರ್ಯರು ಶ್ರೇಯ ಮತ್ತು ಪ್ರೇಯದಲ್ಲಿ ವಿವೇಕಿಯಾದವನು ಶ್ರೇಯಸ್ಸಿನ ಹಾದಿಯನ್ನನುಸರಿಸುವನೆಂದು ಹೇಳುತ್ತ ನಚಿಕೇತನ ತತ್ತ್ವಜ್ಞಾನಾದಿಗಳನ್ನು ನಿರೂಪಿಸಿರುತ್ತಾರೆ.

ಛಾಂದೋಗ್ಯೋಪನಿಷತ್ ಭಾಷ್ಯ:

ಇದರಲ್ಲಿ ಶ್ರೀಮಧ್ವಾಚಾರ್ಯರು ಸಕಲ ವೇದಗಳಿಗೂ ಪುರುಷಸೂಕ್ತವೇ ಮೂಲವೆಂದೂ, ಅದಕ್ಕೆ ಗಾಯತ್ರಿವ್ಯಾಹೃತಿತ್ರಯ ಎಂದೂ ಅದಕ್ಕೆ "ಓಂ" ಕಾರವೇ ಮೂಲವೆಂದೂ, ಇವುಗಳ ಮುಖ್ಯ ತಾತ್ಪರ್ಯ ಪರಮಾತ್ಮನಲ್ಲೇ ಸಮನ್ವಯವೆಂದೂ ಹಾಗೂ ದಹರ ವಿದ್ಯಾವರ್ಣನಾದಿಗಳನ್ನು ನಿರೂಪಿಸಿರುತ್ತಾರೆ.

ಐತರೇಯ ಉಪನಿಷತ್ ಭಾಷ್ಯ:

ಇದು ಶ್ರೀಮಧ್ವಾಚಾರ್ಯರಿಗೆ ಅತ್ಯಂತ ಪ್ರಿಯತಮವಾದ ಗ್ರಂಥ ಇದರಲ್ಲಿ ಆಚಾರ್ಯರು ಸಕಲ ವೇದದ ಎಲ್ಲಾ ಶಬ್ದಗಳೂ ಪರಮಾತ್ಮನಲ್ಲೆ ಸಮನ್ವಯ ಎಂದು ಸ್ಪಷ್ಟ ಪಡಿಸಿರುತ್ತಾರೆ. ಈ ಗ್ರಂಥವನ್ನು ಅನುವಾದ ಮಾಡುತ್ತಿದ್ದಾಗಲೇ ಕೊನೆಯಲ್ಲಿ ಅವರು ಉಡುಪಿಯ ಶ್ರೀ ಅನಂತೇಶ್ವರ ದೇವಾಲಯದಿಂದ ಪಿಂಗಳ ನಾಮ ಸಂವತ್ಸರ ಮಾಘಶುದ್ಧನವಮಿದಿನ ಬದರಿ ಕಾಶ್ರಮಕ್ಕೆ ಪ್ರಯಾಣ ಬೆಳಸಿದರು. ಆ ದಿನವನ್ನು ಅವರ ಅನುಯಾಯಿಗಳು 'ಶ್ರೀ ಮಧ್ವನವಮಿ' ಎಂದು ಆಚರಿಸಿದರು.

ತೈತ್ತರೀಯ ಉಪನಿಷತ್ ಭಾಷ್ಯ:

ಇದರಲ್ಲಿ ಶ್ರೀಮಧ್ವಾಚಾರ್ಯರು ಶ್ರೀಹರಿಯೇ ಸರ್ವೋತ್ತಮ ದೇವರೆಂದೂ ಇತರ ದೇವತೆಗಳಲ್ಲಿ ತಾರತಮ್ಯ ಉಂಟೆಂದೂ ಹೀಗೆಂದ ಮಾತ್ರಕ್ಕೆ ವೈಷಮ್ಯಾದಿಗಳಿಗೆ ಎಡೆಗೊಡುವುದೆಂಬ ವಾದವನ್ನು ಖಂಡಿಸಿ ಸಮಾಧಾನ ತಿಳಿಸಿರುತ್ತಾರೆ.

ಬೃಹದಾರಣ್ಯಕೋಪನಿಷತ್ ಭಾಷ್ಯ.

ಇದರಲ್ಲಿ ಶ್ರೀಮಧ್ವಾಚಾರ್ಯರು ಜೀವನಾದವನಿಗೆ ಅವನ ನಿರ್ದಿಷ್ಟ ಸಾಧನಾ ಪೂರ್ಣತೆಗೆ ಮೋಕ್ಷ ಎನ್ನುವರು. ಈ ಮೋಕ್ಷಫಲವನ್ನು ಅನುಗ್ರಹಿಸುವವನು ಸಾಕ್ಷಾತ್ ಶ್ರೀನಾರಾಯಣನೇ ಎಂದೂ, ಇದು ಜೀವನಿಗೆ ಅನೇಕ ಜನ್ಮಗಳಸಾಧನೆಯಿಂದ ಲಭಿಸಲಿರುವ ಅಪರೂಪ ಫಲವೆಂದೂ, ಮೋಕ್ಷಸಾಧನೆಯೇ ಸುಜೀವಿಗಳ ಮುಖ್ಯ ಗುರಿಯಾಗಿರಬೇಕೆಂದೂ ತಿಳಿಸಿರುತ್ತಾರೆ. ಹೆಸರಿನಿಂದಲೇ ತಿಳಿಯುವಂತೆ ಈ ಬೃಹದಾರಣ್ಯಕೋಪನಿಷತ್ ಭಾಷ್ಯಗ್ರಂಥವು ವಿಸ್ತಾರವಾದ ದೊಡ್ಡ ಗ್ರಂಥ ಇನ್ನು ಶ್ರೀಮಧ್ವಾಚಾರ್ಯರಿಂದ ರಚಿಸಲ್ಪಟ್ಟ ಪುರಾಣ ಪ್ರಸ್ಥಾನ ಗ್ರಂಥಗಳ ಬಗ್ಗೆ ಕೆಲವಂಶವನ್ನು ತಿಳಿಯೋಣ

## ಪುರಾಣ ಪ್ರಸ್ಥಾನ

ಶ್ರೀಮದ್‌ಭಾಗವತ ತಾತ್ಪರ್ಯ:

ಇದರಲ್ಲಿ ಶ್ರೀಮಧ್ವಾಚಾರ್ಯರು ದ್ವೈತ ಜ್ಞಾನದಿಂದಲೇ ಮೋಕ್ಷ ಎಂದೂ ಶ್ರೀಮದ್ ಭಾಗವತದಿಂದ ಭಗವದ್ ಭಕ್ತಿ ಉಂಟಾಗುವುದೆಂದೂ ಅದೇ ಮೋಕ್ಷ ಮೂಲವೆಂದೂ ತಿಳಿಸುತ್ತಾ.

ದ್ರವ್ಯಂ ಕರ್ಮ ಚ ಕಾಲಶ್ಚ
ಸ್ವಭಾವೋ ಜೀವ ಏವ ಚ
ಯದನುಗ್ರಹತಃ ಸಂತಿ
ನ ಸಂತಿ ಯದುಪೇಕ್ಷಯಾ

ಎಂದು ಸ್ಪಷ್ಟಪಡಿಸಿರುವರು.

ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ:

ಇದು ಶ್ರೀಮಧ್ವಾಚಾರ್ಯರ ಗ್ರಂಥರತ್ನ. ಶ್ರೀಮದ್ರಾಮಾಯಣ ಹಾಗೂ ಶ್ರೀಮನ್ ಮಹಾಭಾರತದಲ್ಲಿ ಎಲ್ಲೆಲ್ಲಿ ಸಂಶಯಾದಿಗಳು ಉದ್ಭವಿಸುವಿಸುವುದೋ ಅಲ್ಲಲ್ಲಿ ಸರಿಯಾದ ಕ್ರಮಾರ್ಥಗಳನ್ನು ಶಾಸ್ತ್ರಾಧಾರದ ಮೇಲೆ ತೋರಿಸಿ ಉಪಕರಿಸಿದ ದಿವ್ಯ ಗ್ರಂಥ. ಉದಾಹರಣೆಗೆ ದ್ರೌಪದೀ ದೇವಿಗೆ ಏಕೆ ಐವರುಪತಿಗಳು? ಅವರ ಹಿನ್ನೆಲೆ ಏನು? ಭೀಮಸೇನರು ಹಿಡಂಬಿಯನ್ನೇಕೆ ವರಿಸಿದರು? ರಾಮಾಯಣದಲ್ಲಿ ಶ್ರೀರಾಮ ಸುಗ್ರೀವನಿಗೆ ಹಾಗೂ ವಿಭೀಷಣರಿಗೆ ಏಕೆ ಸಹಾಯ ಮಾಡಿದ? ವಾಲಿ ಭಕ್ತನಾದರೂ ಶ್ರೀರಾಮ ಏಕೆ ಕೊಂದ? ನಿರಪರಾಧಿಯಾದ ಅಹಲ್ಯೆಗೆ ಏಕೆ ಶಾಪ ಕೊಡಬೇಕಾಯಿತು? ಇತ್ಯಾದಿ ನೂರಾರು ಕುತೂಹಲವನ್ನು ಕೆರಳಿಸುವ ಅಂಶಗಳನ್ನು ಬಹಳ ಚೆನ್ನಾಗಿ ಶ್ರೀಮಧ್ವಾಚಾರ್ಯರು ಬಿಡಿಸಿ ತಿಳಿಸಿರುತ್ತಾರೆ. ಈ ಗ್ರಂಥಾವಲೋಕನವಿಲ್ಲದೆ ಭಾರತ ರಾಮಾಯಣಾದಿಗಳನ್ನು ಎಷ್ಟು, ಓದಿದರೂ ಸಂಶಯವೇ ಸ್ಥಿರ ಪಡುವುದೆಂಬುದಕ್ಕೆ ಸಂದೇಹವಿಲ್ಲ. ಇವರಲ್ಲಿ ಶ್ರೀಮಧ್ವಾಚಾರ್ಯರು ಸಾರಿದ್ದೇನೆಂದರೆ

ನಾಸ್ತಿ ನಾರಾಯಣ ಸಮಂ
ನ ಭೂತೋ ನ ಭವಿಷ್ಯತಿ
ಏತೇನ ಸತ್ಯವಾಕ್ಯೇನ
ಸರ್ವಾರ್ಥಾನ್ ಸಾಧಯಾಮ್ಯಹಮ್

ಗೀತಾಭಾಷ್ಯ:

ಇದು ಶ್ರೀಮಧ್ವಾಚಾರ್ಯರ ಪ್ರಪ್ರಥಮ ಗ್ರಂಥರತ್ನ. ಇದು ಶ್ರೀ ವೇದವ್ಯಾಸರಿಂದಲೇ

## ಅನ್ನದಾನ ಯೋಜನೆ ವಿವರಗಳು

"ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ" ಎನ್ನುವ ಹೊಸ ಯೋಜನೆಯಲ್ಲಿ ತಿರುಮಲೆಗೆ ಬರುವ ಯಾತ್ರಿಕರಿಗಾಗಿ ಉಚಿತ ಭೋಜನ ನೀಡುವ ಕಾರ್ಯವನ್ನು ತಿ. ತಿ. ದೇ. ಆರಂಭಿಸಿದೆ. ಈ ಯೋಜನೆಯ ವಿವರಗಳು ಈ ರೀತಿ ಇವೆ–ಯಾವ ಭಕ್ತರೇ ಆಗಲಿ, ಹತ್ತು ಲಕ್ಷ ರೂ ಗಳನ್ನು ದಾನ ನೀಡಿದಲ್ಲಿ ಅದಕ್ಕೆ ಸಮನಾದ ಅನುದಾನವನ್ನು ತಿ. ತಿ. ದೇ. ಗಳೂ ನೀಡಿ ಒಂದು ದತ್ತಿಯನ್ನು ಸ್ಥಾಪಿಸಿ, ಅದರ ವಾರ್ಷಿಕಬಡ್ಡಿ ಉತ್ಪನ್ನದಿಂದ ದಿನವೂ ಐದುನೂರು ಮಂದಿಗೆ ಉಚಿತ ಭೋಜನ ನೀಡಲಾಗುವುದು. ಈ ದಾನವು ಆದಾಯಕರ ಶಾಸನದ ಯು/ಎಸ್ 80 (ಜಿ) ಕಲಮಿನಂತೆ ಆದಾಯಕರ ವಿಮುಕ್ತವಾಗಿರುವುದು.

ದಾನಿಯ ಹೆಸರನ್ನು ಊಟದ ಕೊಠಡಿಯಲ್ಲಿ ಎದ್ದು ಕಾಣುವಂತೆ ಕಪ್ಪು ಹಲಗೆಯ ಮೇಲೆ ಬರೆಯಲಾಗುವುದು. ಹಾಗೂ ಉಚಿತ ಭೋಜನದ ಚೀಟಿಗಳ ಮೇಲೂ ಮುದ್ರಿಸಲಾಗುವುದು. ಜೊತೆಗೆ ವರ್ಷಕ್ಕೊಮ್ಮೆ ಮೂರು ದಿನಗಳ ಕಾಲ ದಾನಿ ಮತ್ತು ಅವರ ಕುಟುಂಬಕ್ಕೆ ತಿರುಮಲೆಯಲ್ಲಿ ಉಚಿತ ವಸತಿ ಹಾಗೂ ಮೂರು ದಿನವೂ ದೇವಾಲಯದಲ್ಲಿ ಆರತಿಯೊಡನೆ ದರ್ಶನಾವಕಾಶವನ್ನು ಏರ್ಪಡಿಸಲಾಗುವುದು.

ದೇಶದೊಳಗಿನ ಹಾಗೂ ವಿದೇಶಗಳ ಎಲ್ಲಾ ಮಾನವಸೇವಾ ಪ್ರೇಮಿ ಭಕ್ತರೂ ತಿ.ತಿ.ದೇ. ಗಳ ಈ ಯೋಜನೆಗೆ ಉದಾರವಾಗಿ ದಾನ ನೀಡುವುದರಿಂದ ಅತಿ ಹೆಚ್ಚು ಮಂದಿ ಯಾತ್ರಿಕರಿಗೆ ಭೋಜನಾವಕಾಶವುಂಟುಮಾಡಿ, ಅವರು ತಿರುಮಲೆಯಲ್ಲಿ ಅಶನ ಚಿಂತಾತುರರಾಗುವುದನ್ನು ತಪ್ಪಿಸಬೇಕೆಂದು ಈ ಮೂಲಕ ಬೇಡಲಾಗಿದೆ.

**ತಿ.ತಿ.ದೇ.**

ಶ್ಲಾಘಿತವಾಗಿದೆ. ಇದರಲ್ಲಿ ಜ್ಞಾನ ಪೂರ್ವಕ ಕರ್ಮಯೋಗದಿಂದ ಮೋಕ್ಷಪ್ರಾಪ್ತಿ ಎಂದು ಸಾರುತ್ತಾ ಇಡೀ ಗೀತಾಶಾಸ್ತ್ರ ದ್ವೈತ ಪರವಾದುದೆಂಬಂಶವನ್ನು ಸ್ಪಷ್ಟಪಡಿಸಿರುತ್ತಾರೆ.

ಗೀತಾ ತಾತ್ಪರ್ಯ :

ಇದು ಸಣ್ಣ ಗ್ರಂಥವಾದರೂ ಭಾಷ್ಯದಂತೆ ಬಹು ಅರ್ಥ ಗರ್ಭಿತವಾದ ಅವರ್ಣನೀಯಗ್ರಂಥ.

ಯಮಕ ಭಾರತ :

ಇದರಲ್ಲಿ ಶ್ರೀ ಮಧ್ವಾಚಾರ್ಯರು ಶ್ರೀ ಕೃಷ್ಣ ಕಥೆಯನ್ನೂ, ಪಾಂಡವರ ಮಹಿಮೆಯನ್ನೂ 80 ಶ್ಲೋಕಗಳಿಂದ ಬಹುಚೆನ್ನಾಗಿ ವರ್ಣಿಸಿರುತ್ತಾರೆ.

## ಸೂತ್ರ ಪ್ರಸ್ಥಾನ

ಸೂತ್ರಭಾಷ್ಯ, ಅಣುಭಾಷ್ಯ, ಅನುವ್ಯಾಖ್ಯಾನ ಮತ್ತು ನ್ಯಾಯ ವಿವರಣೆ :

ವೇದವ್ಯಾಸರಿಂದ ರಚಿತವಾದ ಬ್ರಹ್ಮಸೂತ್ರಗಳಿಗೆ ಇವು ವ್ಯಾಖ್ಯಾನಗಳು, ಇವುಗಳಲ್ಲಿ ಪರಕೀಯರ ಅಭಿಪ್ರಾಯವನ್ನು ಖಂಡಿಸಿ ದ್ವೈತ ಸಿದ್ಧಾಂತ ಪತಾಕೆಯನ್ನು ಎತ್ತಿ ಹಾರಿಸಿರುತ್ತಾರೆ ಶ್ರೀ ಮಧ್ವಾಚಾರ್ಯರು. ಇವು ವರ್ಣನಾತೀತ ವಿಸ್ತಾರ ಗ್ರಂಥಗಳು. ಪಂಡಿತರುಗಳಿಗೇನೇ ಸಾಕಲ್ಯೇನ ನಿಲುಕದಾಗಿವೆ. ಶ್ರೀಮಧ್ವಾಚಾರ್ಯರ ಅಣುಭಾಷ್ಯಕ್ಕೆ ಶ್ರೀ ಜಯತೀರ್ಥರು ಶ್ರೀ ಮನ್ನ್ಯಾಯಸುಧಾ ಗ್ರಂಥವನ್ನು ರಚಿಸಿರುತ್ತಾರೆ.

## ಪ್ರಕರಣ ಗ್ರಂಥಗಳು

ಪ್ರಮಾಣಲಕ್ಷಣ :

ಇದರಲ್ಲಿ ಶ್ರೀ ಮಧ್ವಾಚಾರ್ಯರು ತಿಳಿಸಿರುವುದೇನೆಂದರೆ ಸಕಲರೂ ಮೋಕ್ಷಾಪೇಕ್ಷಿಗಳೇ. ಅದು ಲಭಿಸಲು ಕೇವಲ ಈಶ್ವರ ಜ್ಞಾನವೇ ಮುಖ್ಯ. ಪ್ರಮಾಣ ಸ್ವರೂಪ ಲಕ್ಷಣ ಜ್ಞಾನವಿಲ್ಲದೆ ಪ್ರಮೇಯ ಜ್ಞಾನ ಆಗಲಾರದು. ಆದ್ದರಿಂದ ಪ್ರಮಾಣ ಸ್ವರೂಪ ಲಕ್ಷಣವನ್ನು "ಯಥಾರ್ಥಂ ಪ್ರಮಾಣಂ" ಎಂದು ಉಲ್ಲೇಖಿಸಿರುತ್ತಾರೆ. ಈ ಗ್ರಂಥ ಅತ್ಯಂತ ಗಂಭೀರವಾದುದು. ಇದನ್ನೇ ಜಯತೀರ್ಥರು ವಿದ್ಯಾರಣ್ಯರಿಗೆ ತೋರಿಸಿ ಕೀರ್ತಿಗಳಿಸಿದ್ದರು.

ಕಥಾಲಕ್ಷಣ :

ಇದರಲ್ಲಿ ಶ್ರೀ ಮಧ್ವಾಚಾರ್ಯರು 'ತತ್ತ್ವ ನಿರ್ಣಯದಲ್ಲಿ 3 ಬಗೆಯುಂಟು. ಅದೇ ವಾದ, ಜಲ್ಪ, ವಿತಂಡ ಎಂದು. ಕೇವಲ ಖ್ಯಾತಿಗಾಗಿ ಮಾಡುವ ವಾದಕ್ಕೆ ಜಲ್ಪವೆಂದೂ, ತತ್ತ್ವವಿರುದ್ಧ ಮಾಡುವ ಅಶ್ರಮವಾದಕ್ಕೆ ವಿತಂಡವಾದ' ಎಂದೂ ತಿಳಿಸಿದರು.

ಮಾಯಾವಾದಿ ಖಂಡನ

ಇದು ಶ್ರೀ ಮಧ್ವಾಚಾರ್ಯರ ಖಂಡನ ಕ್ರಮದಲ್ಲೊಂದು ಗ್ರಂಥ. ಜಗತ್ತಿನ ಮಿಥ್ಯತ್ವ ಹೇಳುವ, ಜೀವ ಪರಮಾತ್ಮರ ಐಕ್ಯತೆ ತಿಳಿಸುವ ಪರಮಾತ್ಮನಿಗೆ ಅಜ್ಞಾನ ಕೊಡಿಸುವ ಮಿಥ್ಯಾ ಮತಾದಿಗಳನ್ನು ಅನೇಕಾನೇಕ ನಿಗಮಯುಕುತಿಗಳಿಂದ ಖಂಡಿಸಿ ಹರಿಸರ್ವೋತ್ತಮತ್ವವನ್ನೂ, ಜಗತ್ತಿನ ಸತ್ಯತ್ತ್ವವನ್ನೂ, ಜೀವೇಶ ಭೇದವನ್ನೂ, ಹಾಗೂ ಪಂಚಭೇದ ತಾರತಮ್ಯಾದಿಗಳು ಸತ್ಯಹಾಗೂ ನಿತ್ಯ ಎಂಬುದನ್ನು ನಿರೂಪಿಸಿದರು.

ಮಿಥ್ಯಾತ್ವಾನುಮಾನಖಂಡನಾ :

ಇದರಲ್ಲಿ ಶ್ರೀ ಮಧ್ವಾಚಾರ್ಯರು ಶ್ರೀ ಹರಿಯಿಂದ ಯಥಾವತ್ತೂ ಸೃಷ್ಟಿಯಾದ ಜಗತ್ತು ಪಾರಮಾರ್ಥಿಕ ಸತ್ಯವಾದದ್ದರಿಂದ ಇದರ ಕರ್ತೃವಾದ ಬ್ರಹ್ಮನು ಗುಣಪೂರ್ಣನೆಂದು ವಾದಿಸಿದರು.

ಉಪಾಧಿ ಖಂಡನಾ :

ಇದರಲ್ಲಿ ಶ್ರೀ ಮಧ್ವಾಚಾರ್ಯರು ಪ್ರಮಾಣ ಸಿದ್ಧವಾದ ಭೇದವನ್ನು ನಿರಾಕರಿಸಲು ಸಾಧ್ಯವೇ ಇಲ್ಲವೆಂದೂ ಅದ್ವೈತ ಮತದಲ್ಲಿ ಉಪಾಧಿಯಾದ ಅಜ್ಞಾನವೇ ಕೊಡುವುದಿಲ್ಲ ಎಂದು ಮುಂತಾಗಿ ತಿಳಿಸಿದರು.

ತತ್ತ್ವವಿವೇಕ :

ಇದರಲ್ಲಿ ಶ್ರೀ ಮಧ್ವಾಚಾರ್ಯರು ;
ಸ್ವತಂತ್ರಂ ಅಸ್ವತಂತ್ರಂಚ
ಪ್ರಮೇಯಂ ದ್ವಿವಿಧಂ ಮತಂ
ಸ್ವತಂತ್ರೋ ಭಗವಾನ್ ವಿಷ್ಣುಃ
ನಿರ್ದೋಷಾಖಿಲ ಸದ್ಗುಣಃ

ಗುಣ, ಕ್ರಿಯಾ, ಜಾತಿ, ಶಕ್ತಿ, ಸಾದೃಶ್ಯ ಮೊದಲಾದ ಧರ್ಮಗಳು ವಸ್ತುವಿನ ಸ್ವರೂಪಗಳು. ಕಾರ್ಯ, ಕಾರಣಗುಣ, ದ್ರವ್ಯ, ಕ್ರಿಯಾ, ಕ್ರಿಯಾವತ್, ಇತ್ಯಾದಿಗಳು ವಸ್ತುವಿನ ಭೇದಾಭೇದ ಸ್ವರೂಪಗಳು . ಈ ರೀತಿ ಸ್ವತಂತ್ರ, ಅಸ್ವತಂತ್ರ ಪ್ರಮೇಯಗಳನ್ನು ನಿರೂಪಿಸಿ ಈ ಪರತಂತ್ರ ವಸ್ತುಗಳು ಸರ್ವತಂತ್ರ ಸ್ವತಂತ್ರನಾದ ವಿಷ್ಣುವಿನ ಅಧೀನ ಎಂದು ತಿಳಿಸಿದರು.

ತತ್ತ್ವ ಸಂಖ್ಯಾನ :

ಇದರಲ್ಲಿ ಶ್ರೀಮಧ್ವಾಚಾರ್ಯರು ತತ್ತ್ವವಿವೇಕದಂತೆ ಸ್ವತಂತ್ರಾ ಸ್ವತಂತ್ರ ತತ್ತ್ವಗಳನ್ನು ತಿಳಿಸಿ ಸಕಲ ಜಗತ್ತೂ ಪರಮಾತ್ಮನ ಅಧೀನ ಎಂದರಿತು ಉಪಾಸನಾ ಮಾಡಿದವ ಪರಮಾತ್ಮನ ಪ್ರಸಾದದಿಂದ ಮೋಕ್ಷ ಹೊಂದುವನೆಂದು ತಿಳಿಸಿದ್ದಾರೆ.

ತತ್ತ್ವೋದ್ಯೋತ :

ಇದು ಶ್ರೀ ಮಧ್ವಾಚಾರ್ಯರ ಪ್ರಮಾಣ ಜಟಿಲವಾದ ಚಿಕ್ಕ ಪ್ರಬಂಧ ಗ್ರಂಥ. ತಾನು ಅಲ್ಪ ಮತಿಯವನೆಂದರಿಯುವುದೇ ಸಾಧನಾಲಕ್ಷಣ ಎಂದೂ ಪಂಚಭೇದ ತಾರತಮ್ಯಾದಿಗಳು ಸತ್ಯ ಹಾಗೂ ನಿತ್ಯ ಮತ್ತು ಮುಕ್ತಾವಸ್ಥೆಯಲ್ಲೂ ತಾರತಮ್ಯ ಉಂಟೆಂದು ತಿಳಿಸಿರುತ್ತಾರೆ.

ವಿಷ್ಣು ತತ್ತ್ವನಿರ್ಣಯ :

ಇದು ಶ್ರೀಮಧ್ವಾಚಾರ್ಯರ ಇಷ್ಟ ಗ್ರಂಥ ರಾಜ. ಇದರಲ್ಲಿ ಅವರು,

ಸದಾಗಮೈಕ ವಿಜ್ಞೇಯಂ
ಸಮತೀತ ಕ್ಷರಾಕ್ಷರಂ
ನಾರಾಯಣಂ ಸದಾ ವಂದೇ
ನಿರ್ದೋಷಾಶೇಷ ಸದ್ಗುಣಮ್

ಆಗಮ ವೇದ್ಯವಾದ, ರಮಾಬ್ರಹ್ಮಾದಿ ವಂದ್ಯನಾದ, ಸರ್ವಗುಣ ಪರಿಪೂರ್ಣನಾದ, ದೋಷ ಗಂಧ ವಿದೂರನಾದ ಶ್ರೀಮನ್ನಾರಾಯಣನಿಗೆ ನಮಸ್ಕಾರ ಎಂದು ಒಂದೊಂದು ಪದಗಳಲ್ಲೂ ಪರಮಾತ್ಮನ ಅಪಾರ ಮಹಿಮೆಯನ್ನು ಚಿತ್ರವಿಚಿತ್ರವಾಗಿ ವರ್ಣಿಸಿದ್ದಾರೆ.

ಕರ್ಮನಿರ್ಣಯ :

ಕೇವಲ ಜಡ ಕರ್ಮಾಚರಣೆಯಿಂದ ಮೋಕ್ಷವಾಗಲಾರದು. ಜ್ಞಾನ ಸಹಿತ ಅನುಸಂಧಾನ ಪೂರ್ವಕವಾದ ಸತ್ಕರ್ಮಾಚರಣೆಯೇ ಮುಖ್ಯ ಎಂದು ಶ್ರೀ ಮಧ್ವಾಚಾರ್ಯರು ನಿರೂಪಿಸಿದರು.

## ತಂತ್ರ ಗ್ರಂಥಗಳು

ತಂತ್ರಸಾರ : ಈಗ್ರಂಥದಲ್ಲಿ 4 ಅಧ್ಯಾಯಗಳಿವೆ.

1 ನೇ ಅಧ್ಯಾಯದಲ್ಲಿ :

ಅಷ್ಟಮಹಾಮಂತ್ರ, ಅದರ ಉತ್ಪತ್ತಿಕ್ರಮ, ಜಪ, ಪೂಜಾಕ್ರಮವನ್ನೂ

2 ನೇ ಅಧ್ಯಾಯದಲ್ಲಿ :

ಕಳಶಪೂಜಾ, ಹವನ ಹೋಮಾದಿ ವಿಚಾರಗಳನ್ನೂ

3 ನೇ ಅಧ್ಯಾಯದಲ್ಲಿ :

ದೇವ ಮಂದಿರರಚನಾ, ಪ್ರತಿಮಾಲಕ್ಷಣ, ದೇವತಾಪ್ರತಿಷ್ಠಾ, ಸಂಪ್ರೋಕ್ಷಣಾ, ಹಾಗೂ ಉತ್ಸವಾದಿ ಕ್ರಮಗಳನ್ನು ವಿವರಿಸಿ,

4 ನೇ ಅಧ್ಯಾಯದಲ್ಲಿ :

ಮಂತ್ರ, ಯಂತ್ರ, ಯಮನಿಯಮ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ, ಜ್ಞಾನ, ಭಕ್ತಿ, ವೈರಾಗ್ಯ, ಮೋಕ್ಷಾದಿಗಳ ವಿಚಾರ ಹರಿಸ್ಮರಣಪೂರ್ವಕವೇ ಮಾಡಬೇಕೆಂದು ತಿಳಿಸಿರುತ್ತಾರೆ.

ಸದಾಚಾರ ಸ್ಮೃತಿ :

ಆಚಾರ ಪರಮೋಧರ್ಮಃ–ಆದ್ದರಿಂದ ಶುದ್ಧಾಚಾರಕ್ರಮದಿಂದ ಹರಿಗರ್ಪಿತ ಮನೋವೃತ್ತಿಯಿಂದ ಆರ್ಜಿತ ಕರ್ಮ ಫಲದಾಯಕ ಎಂದಿದ್ದಾರೆ.

ಕೃಷ್ಣಾಮೃತ ಮಹಾರ್ಣವ :

ಇದರಲ್ಲಿ ಶ್ರೀ ಮಧ್ವಾಚಾರ್ಯರು ವೈಷ್ಣವ ಧರ್ಮಗಳ ವಿಚಾರ, ನವವಿಧ ಭಕ್ತಿಕ್ರಮ, ಗೋಪೀಚಂದನ ಹಾಗೂ ಊರ್ಧ್ವ ಪುಂಡ್ರ ಮಹಿಮಾ, ನಿರ್ಮಾಲ್ಯ ತೀರ್ಥ ಮಹಿಮಾ ಅಂಗಾರ ಹಾಗೂ ಹರಿದಿನಾಚರಣೆಯ ಮಹಿಮಾದಿಗಳನ್ನು ತಿಳಿಸುತ್ತಾರೆ. ಇವೆಲ್ಲಾ ವಿಷ್ಣುಪ್ರೀತ ನಾಗುವ ಕಾರ್ಯಗಳೆಂದು ತಿಳಿಸಿದ್ದಾರೆ.

ಯತಿ ಪ್ರಣವ ಕಲ್ಪ :

ಯತ್ಯಾಶ್ರಮ ಸ್ವೀಕರಿಸುವವುನ್ನ "ವಿಷ್ಣುಃ ಸರ್ವೋತ್ತಮ ತ್ವಂಚ ಸರ್ವದಾ ಪ್ರತಿಪಾದಯ" ಎಂಬ ಪ್ರಮಾಣವಚನಕ್ಕೆ ದೀಕ್ಷಾ ಬದ್ಧರಾಗಿ ಯತ್ಯಾಶ್ರಮ ಸ್ವೀಕರಿಸಬೇಕೆಂಬ ದೀಕ್ಷಾ ತಿಳಿಸಿತ್ತಾರೆ.

ಜಯಂತಿ ನಿರ್ಣಯ :

ಇದರಲ್ಲಿ ಶ್ರೀ ಮಧ್ವಾಚಾರ್ಯರು ಶ್ರೀ ಕೃಷ್ಣ ಜಯಂತಿ ನಿರ್ಣಯಿಸುವ ಬಗೆ ಹಾಗೂ ಏಕಾದಶಿ ನಿರ್ಣಯಾದಿ ಕ್ರಮವನ್ನು ತಿಳಿಸಿರುತ್ತಾರೆ.

ನಖಸ್ತುತಿ :

ಇದರಲ್ಲಿ ಶ್ರೀ ಮಧ್ವಾಚಾರ್ಯರು ಎರಡು ಶ್ಲೋಕಗಳಲ್ಲಿ ಶ್ರೀಲಕ್ಷ್ಮೀ ನರಸಿಂಹದೇವರ ದಿವ್ಯ ನಖವರ್ಣನೆ ಮಾಡಿರುತ್ತಾರೆ. ಇದರಲ್ಲಿ ಜೀವ ನಾಡನವನು ಪರಮಾತ್ಮನನ್ನು ಹೇಗೆ ಕೊಂಡಾಡಬೇಕೆಂಬ ಕ್ರಮವನ್ನು ತಿಳಿಸಿರುತ್ತಾರೆ.

ದ್ವಾದಶ ಸ್ತೋತ್ರ :

ಇದು ಶ್ರೀ ಮಧ್ವಾಚಾರ್ಯರ ಶಾಸ್ತ್ರ ಸಮ್ಮತವಾದ ಭಕ್ತಿ ಗೀತೆ. ಇದೇ ಹರಿದಾಸ ಸಾಹಿತ್ಯಕ್ಕೆ ಉಗಮಸ್ಥಾನವಾದ ಮೂಲ ಎಂದರೆ ತಪ್ಪಾಗಲಾರದು. ಶೃತಿ ಬದ್ಧರಾಗಿ ಭಕ್ತಿ ಯಿಂದ ಹಾಡಲು ಬರುತ್ತದೆ.

ಶ್ರೀ ಕೃಷ್ಣ ಗದ್ಯ :

ಇದರಲ್ಲಿ ಶ್ರೀ ಮಧ್ವಾಚಾರ್ಯರು ಶ್ರೀಕೃಷ್ಣನನ್ನು ಭಕ್ತಿಯಿಂದ ಕೊಂಡಾಡಿರುತ್ತಾರೆ.

ಶ್ರೀಮಧ್ವಾಚಾರ್ಯರು ಬೋಧಿಸಿದ ತತ್ತ್ವಸಾರ;

ಶ್ರೀ ಹರಿಯೇ ಸರ್ವೋತ್ತಮ, ವಾಯುಜೀವೋತ್ತಮ, ಜಗತ್ತು ಸತ್ಯವಾದುದು, ಪಂಚ ಭೇದ ತಾರತಮ್ಯಾದಿಗಳು ಪರಮಾರ್ಥಿಕ ಸತ್ಯ ಹಾಗೂ ನಿತ್ಯ ಸಕಲ ಜೀವಿಗಳೂ ಪರಮಾತ್ಮನ ಅನುಚರರು ಹಾಗೂ ದಾಸರು, ನಿತ್ಯದಲ್ಲೂ ಹಾಗೂ ಮೋಕ್ಷದಲ್ಲೂ ತಾ ರ ತ ಮ್ಯ ಉಂಟು. ಸ್ವರೂಪ ಸುಖಾನುಭವವೇ ಮೋಕ್ಷ. ನಿರ್ಮಲ ಭಕ್ತಿಯೇ ಮುಕ್ತಿಗೆ ಸಾಧನಾ. ಪ್ರತ್ಯಕ್ಷ, ಅನುಮಾನ, ಆಗಮಗಳೇ ಪ್ರಮಾಣತ್ರಯಗಳು. ಶ್ರೀಹರಿ ಆಗಮ ವೇದ್ಯ ಎಂದು ಶ್ರೀ ಮಧ್ವಾಚಾರ್ಯರು ಸ್ಥಿರಪಡಿಸಿ, ಉಡುಪಿಯಲ್ಲಿ ಶ್ರೀಕೃಷ್ಣನನ್ನು ಸ್ಥಾಪಿಸಿ ವಿರಾಜಿಸಿದರು.

ಅರ್ಪಣ :

ಹೀಗೆ ಜೀವೋತ್ತಮರಾಗಿ, ವೇದೋಕ್ತಗುರುಗಳಾಗಿ, ಮೂರು ಅವತಾರದಲ್ಲಿ ಬಲ ಹಾಗೂ ಅಪಾರ ಜ್ಞಾನಸಾಧನೆಮಾಡಿ ಅಣಿಮಾದಿ ಅಷ್ಟಸಿದ್ಧಿ ಪಡೆದ ಬಗೆಯನ್ನು ಪ್ರದರ್ಶಿಸಿ ಏಕವಿಂಶತಿ ಕುಭಾಷ್ಯಗಳನ್ನು ಖಂಡಿಸಿ ಶ್ರೀ ಪದ್ಮನಾಭತೀರ್ಥರೇ ಆದಿಯಾದ 15 ಜನ ಶಿಷ್ಯರಿಗೆ ಅನುಗ್ರಹಿಸಿದ ಮುಖ್ಯವಾಗಿ ಶ್ರೀ ಜಯತೀರ್ಥರನ್ನು ಪುನೀತಗೊಳಿಸಿದ ಸಕಲ ಜೀವಿಗಳಲ್ಲೂ ನಿಂತು ಅನವರತ ಭಗವತ್ ಸೇವೆ ಮಾಡುತ್ತಿರುವ ನಮಗೆಲ್ಲಾ ಮೋ ಕ್ಷ ಪ್ರ ದ ರಾ ದ ಶ್ರೀ ಶ್ರೀ ಮ ಧ್ವಾ ಚಾ ರ್ಯ ರು ನಮಗೆಲ್ಲಾ ಸದಾ ಅನುಗ್ರಹಿಸಲಿ.

# ಜಗನ್ನಾಥ ದಾಸರ ತತ್ತ್ವಸುವ್ವಾಲಿ

ಶ್ರೀಮತಿ ಎನ್. ಪುಷ್ಪ

ದ್ವೈತದ ಹಿನ್ನೆಲೆಯಲ್ಲಿ ರಚಿತವಾದ ಎರಡನೆಯ ಘಟ್ಟದ ದಾಸಸಾಹಿತ್ಯದಲ್ಲಿ, ಹರಿದಾಸ ಚತುಷ್ಟಯರಲ್ಲಿ ಒಬ್ಬರೆನಿಸಿದ ಜಗನ್ನಾಥ ದಾಸರಿಗೆ ವಿಶೇಷ ಸ್ಥಾನವಿದೆ. ಹರಿದಾಸ ಸಾಹಿತ್ಯದ ಅಪೂರ್ವ ಗ್ರಂಥವೆನಿಸಿದ 'ಹರಿಕಥಾಮೃತಸಾರ' ವನ್ನು ಅವರು ರಚಿಸಿರುವುದೇ ಇದಕ್ಕೆ ಸಾಕ್ಷಿ. ಇದಲ್ಲದೆ ಹಲವಾರು ಕೀರ್ತನೆಗಳು, ಉಗಾಭೋಗಗಳು, ಸುಳಾದಿಗಳನ್ನೂ ಜೊತೆಗೆ ತತ್ತ್ವಸುವ್ವಾಲಿ ಎಂಬ ಪುಟ್ಟಕೃತಿಯನ್ನೂ ಜಗನ್ನಾಥದಾಸರು ರಚಿಸಿದ್ದಾರೆ. ಈ ಎಲ್ಲ ಕೃತಿಗಳ ಮುಖ್ಯಗುರಿ ದ್ವೈತತತ್ತ್ವ ಪ್ರತಿಪಾದನೆ.

ಪ್ರಸ್ತುತ 'ತತ್ತ್ವಸುವಾಲಿ'ಯ ವಸ್ತು ಬಹುಮಟ್ಟಿಗೆ ದೇವತೆಗಳ ಸ್ತೋತ್ರ ಮಹಿಮೆಗಳ ವರ್ಣನೆಯೇ ಆಗಿದೆ. ಕೃತಿಯ ಪ್ರತಿ ಅಧ್ಯಾಯದ ಶೀರ್ಷಿಕೆಗಳೇ–ಶ್ರೀವಿನಾಯಕಸ್ತುತಿ, ನವಗ್ರಹಸ್ತೋತ್ರ, ಅಗ್ನಿಸ್ತುತಿ, ರುದ್ರದೇವರಸ್ತೋತ್ರ, ವಾಯುದೇವರಸ್ತೋತ್ರ, ಬ್ರಹ್ಮದೇವರಸ್ತೋತ್ರ, ಶ್ರೀಭೂದುರ್ಗಾಸ್ತುತಿ, ಶ್ರೀರುಕ್ಮಿಣೀವಿಲಾಸ, ದಶಾವತಾರಸ್ತೋತ್ರ, ಶ್ರೀವೆಂಕಟೇಶ್ವರಸ್ತುತಿ, ಶ್ರೀನಿವಾಸನಸ್ತೋತ್ರ, ಶ್ರೀಕೃಷ್ಣಸ್ತೋತ್ರ,–ಕೃತಿಯ ವಸ್ತು ಏನೆಂಬ ಮೇಲಿನ ಹೇಳಿಕೆಗೆ ಪೋಷಕವಾಗಿದೆ. ಮಾಯಾವಾದ ಖಂಡನವೆಂಬ ಕಡೆಯ ಅಧ್ಯಾಯಮಾತ್ರ ಶುದ್ಧವಾಗಿ, ದ್ವೈತ ಮತದ ಮುಖ್ಯ ಸಿದ್ಧಾಂತಗಳ ನಿರೂಪಣೆ ಹಾಗೂ ಮತ ಪ್ರಸಾರಕ್ಕಾಗಿಯೇ ಬರೆದುದಾಗಿದೆ. ಸ್ತುತಿ ಮಹಿಮೆಗಳ ವರ್ಣನೆಯೇ ಕೃತಿಯ ವಸ್ತು, ಅಂದ ಮಾತ್ರಕ್ಕೆ ವಿಷಯ ಅಷ್ಟಕ್ಕೇ ನಿಂತಿಲ್ಲ. ದೇವತೆಗಳ ಸ್ತುತಿ ಮಾಡುತ್ತಲೇ ದ್ವೈತ ಮತದ ಮೂಲ ತತ್ತ್ವಗಳನ್ನು ಜಗನ್ನಾಥದಾಸರು ಧಾರಾಳವಾಗಿ ಪ್ರತಿಪಾದಿಸಿದ್ದಾರೆ. ಕೃತಿಯ ಉದ್ದಕ್ಕೂ ಅವರ ಹರಿನಾಮ ಸಂಕೀರ್ತನೆ ಮಾಡಿರುವ ರೀತಿ, ದೈವದಲ್ಲಿ ಆರ್ತಭಾವದಿಂದ ನಿವೇದಿಸುವ ಭಕ್ತಿಯ ಪರಿ ನಮ್ಮ ಮನಸೆಳೆಯುವ ಪ್ರಮುಖ ಅಂಶಗಳಾಗಿವೆ.

ಎಲ್ಲ ದಾಸರಂತೆಯೇ ಜಗನ್ನಾಥದಾಸರ ಪಾಲಿಗೂ ಹರಿಯೇ ಸರ್ವೋತ್ತಮನಾದರೂ ಉಳಿದ ದೈವಗಳನ್ನು ಸ್ಮರಿಸದೆ ಬಿಟ್ಟಿಲ್ಲ. ಹರಿಗೆ ಪ್ರಿಯರಾದವರೆಲ್ಲ ಹರಿದಾಸರಿಗೂ ಪ್ರಿಯರೇ: ಆದ್ದರಿಂದಲೇ ದಾಸರ ಕೃತಿಯ ಆರಂಭದ ಅಧ್ಯಾಯಗಳಲ್ಲಿ ಗಣಪತಿ, ನವಗ್ರಹಗಳು, ಅಗ್ನಿ, ರುದ್ರ, ಬ್ರಹ್ಮ ಮೊದಲಾದ ದೈವಗಳನ್ನೆಲ್ಲ ಮನಃ ಪೂರ್ವಕವಾಗಿ ಸ್ತುತಿಸಿದ್ದಾರೆ. ಈ ಎಲ್ಲ ದೈವಗಳ ಮಹಿಮೆಗಳನ್ನೂ ಹಾಡಿ ಹೊಗಳಿರುವುದರ ಉದ್ದೇಶ ಎರಡು–೧ ಸಹಜವಾಗಿಯೇ ಆ ದೈವಗಳ ಮೇಲಿರುವ ಭಕ್ತಿ. ೨ ಈ ದೈವಗಳೆಲ್ಲ ಹರಿಪ್ರಿಯರಾದ್ದರಿಂದ, ಹರಿಯ ಸಾಮೀಪ್ಯ ಹೊಂದಲು, ಹರಿಭಕ್ತಿಯಲ್ಲಿ ಸದಾ ತನ್ನ ಮನಸ್ಸು ನೆಲೆಗೊಳ್ಳಲು ಈ ದೇವತೆಗಳು ತನಗೆ ಸಹಾಯಕರಾಗುತ್ತಾರೆ, ಪ್ರೇರಕರಾಗುತ್ತಾರೆ ಎಂಬ ನಂಬಿಕೆ. ಈ ಮಾತಿಗೆ ಪೂರಕವಾಗಿ ನವಗ್ರಹ ಸ್ತೋತ್ರಮಾಡುತ್ತ ಹಾಡಿರುವ ಒಂದು ಪದ್ಯವನ್ನು ನೋಡಿ :

ರೋಹಿಣೀ ರಮಣ ಮದ್ದೇಹ ಗೇಹಾದಿಗಳ  
ಮೋಹ ಪರಿಹರಿಸಿ ಮನದಲ್ಲಿ ಮನದಲ್ಲಿ  
ಎನಗೆ ಗರುಡ  
ವಾಹನ ಸ್ಮರಣೆಯನು ಕರುಣಿಸೊ

ಮಧ್ವಮತದ ಮೂಲತತ್ತ್ವಗಳಲ್ಲಿ ತಾರತಮ್ಯ ತತ್ತ್ವವೂ ಒಂದು ಪ್ರಮುಖ ತತ್ತ್ವ. ಆಯಾ ದೇವತೆಗಳ ಗುಣಗಳಿಗೆ ಅನುಸಾರವಾಗಿ ದೇವತೆಗಳಿಗೆ ಒಂದೊಂದು ಶ್ರೇಣಿಯನ್ನು ಕೊಡಲಾಗಿದೆ. ಅಲ್ಲಿ ಬರುವ ರುದ್ರನನ್ನು ಜಗನ್ನಾಥದಾಸರು ನಾನಾರೀತಿಯಲ್ಲಿ ವಂದಿಸಿ, ಅವನ ಮಹಿಮೆಗಳನ್ನು ವಿಶೇಷವಾಗಿ ಕೊಂಡಾಡಿ ಹರಿಯಗುಣ, ರೂಪ, ಕ್ರಿಯೆಗಳ ಬಗ್ಗೆ ಆಲೋಚಿಸಲು ಹರನು ತನಗೆ ಮನಸ್ಸು ಕೊಡಬೇಕೆಂದು ಆರ್ತರಾಗಿ ಕೇಳಿ ಕೊಳುತ್ತಾರೆ.

ಲೋಚನ ತ್ರಯ ನಿನ್ನ ಯಾಚಿಸುವೆ ಸಂತತವು  
ಖೇಚರೇಶನ ವಹನ ಗುಣರೂಪ ಗುಣರೂಪ  
ಕ್ರಿಯೆಗಳಾ  
ಲೋಚನೆಯ ಕೊಟ್ಟು ಸಲಹಯ್ಯ

ರುದ್ರನಿಗಿಂತ ಪ್ರಧಾನವಾದ ಸ್ಥಾನವನ್ನು ಪಡೆದಿರುವ ಬ್ರಹ್ಮಮತ್ತು ವಾಯುದೇವರನ್ನು ಜಗನ್ನಾಥದಾಸರು ಸೊಗಸಾಗಿ ಕೊಂಡಾಡಿದ್ದಾರೆ. ತಾರತಮ್ಯ ಶ್ರೇಣಿಯಲ್ಲಿ ಬ್ರಹ್ಮ ಹಾಗೂ ವಾಯುವಿಗೆ ತೃತೀಯ ಸ್ಥಾನವನ್ನು ಕೊಡಲಾಗಿದೆ. ಬ್ರಹ್ಮನ ತಂದೆ ಹರಿ. ತಾಯಿ ಲಕ್ಷ್ಮಿ. ಸತ್ಯಲೋಕವೆ ಅವನ ಸದನ. ತತ್ತ್ವಾಭಿಮಾನಿಗಳೆ ಬ್ರಹ್ಮನ ಭೃತ್ಯರು. ಇಂತಹ ಬ್ರಹ್ಮನನ್ನು ಭಕ್ತಿಯಿಂದ ಭಜಿಸಿದರೆ ಹರಿಯ ಕರುಣೆಗೆ ತಾನು ಪಾತ್ರನಾಗುವುದು ಅತ್ಯಂತ ಸುಲಭವೆಂಬುದು ಜಗನ್ನಾಥದಾಸರ ಮತ. ಬ್ರಹ್ಮನಲ್ಲಿಟ್ಟಿರುವ ಅವರ ಭರವಸೆಯನ್ನು ಸರಳವಾಗಿ ಮೂಡಿಸುವ ಈ ತ್ರಿಪದಿಯನ್ನು ನೋಡಿ :

ಮಾತರಿಶ್ವನೆ ನಿನ್ನ ಪ್ರೀತಿಯೊಂದೇ ಜಗ  
ನ್ನಾಥ ವಿಠಲನ್ನ ಕರುಣಕ್ಕೆ। ಕರುಣಕ್ಕೆ  
ಕಾರಣವು ಯಮ  
ಯಾತನವು ಬರಲು ನಾನಂಜೆ॥

ದ್ವೈತಮತದಲ್ಲಿ ಬಹುಮುಖ್ಯಸ್ಥಾನವನ್ನುಗಳಿಸಿರುವ ವಾಯುವಿನಸ್ತುತಿಗೆ ಜಗನ್ನಾಥದಾಸರು ೧೦೩ ತ್ರಿಪದಿಗಳನ್ನು ಮೀಸಲಿರಿಸಿದ್ದಾರೆ. ಜ್ಞಾನ, ಭಕ್ತಿ, ಧೈರ್ಯ, ವೈರಾಗ್ಯ ಮೊದಲಾದ ಜಗತ್ಪ್ರಸಿದ್ಧ ಗುಣಗಳನ್ನೆಲ್ಲ ಹೊಂದಿರುವ ಮಹಾಭಾಗವತೋತ್ತಮ ವಾಯುದೇವ. ಶ್ವಾಸರೂಪದಿಂದ ಈ ಸಮಸ್ತ ಜಗತ್ತನ್ನೂ ಧರಿಸಿ, ರಕ್ಷಿಸುವ 'ಪ್ರಾಣನಾಯಕ'ನಾದ ವಾಯುವಿನ ಸ್ತುತಿಯಿದು :

ಪ್ರಾಣನಾಯಕ ನಿನ್ನ ಕಾಣಬೇಕೆಂದೆನುತ  
ನಾನುರಾಗದಲಿ ನಮಿಸುವೆ ನಮಿಸುವೆನು  
ಮೂಜಗ  
ತ್ರಾಣ ಪಂಚಾಸ್ಯ ಪರಮೇಷ್ಠಿ

ಹರಿಯ ನಿಷ್ಠಾವಂತ ಬಂಟನಾದ ವಾಯುವಿನ ಪರಾಕ್ರಮದ ಮುಂದೆ ಯಾರೂ ನಿಲ್ಲುವಂತಿಲ್ಲ. 'ಅಂಜಿದವರಿಗೆ ವಜ್ರ ಪಂಜರನೆನಿಸುವ', 'ರಣದೊಳು ಕಿರೀಟಿಯ ಧ್ವಜವಾಗಿ ಕಾಯ್ದ', 'ಕಾಲನಿಯಾಮಕ'ನೂ, 'ಲೋಕಗುರುವೂ' ಆದ ವಾಯುದೇವನ ಚಿತ್ರವಿದು :

ಆಖಣಾಶ್ಮನೆ ನಿನ್ನ ನೋಕಲರಿಯವು ದೋಷ  
ಶ್ರೀಕಂಠ ಮುಖ್ಯಸುರರಿಗೆ ಸುರರಿಗಿಲ್ಲವೊ  
ಭಾರ  
ತೀಕಾಂತ ನಿನಗೆ ಬಹುದೆಂತೂ

ಒಟ್ಟನಲ್ಲಿ ಹರಿಯಿಂದ ಬ್ರಹ್ಮಪಟ್ಟ ಕಟ್ಟಿಸಿಕೊಂಡು, ಹದಿನಾಲ್ಕು ಲೋಕಗಳ ಅಧಿಪತಿಯಾಗಿ, ಹದಿನಾಲ್ಕು ಲೋಕಗಳ ಜೀವರೊಳಗಿದ್ದು ೨೧೬೦೦ ಶ್ವಾಸಗಳನ್ನು ಮಂತ್ರ ಪೂರ್ವಕ ಜಪಿಸುತ್ತ, ಶ್ರೀ ಹರಿಯನ್ನು ಮೆಚ್ಚಿಸಿದ ವಾಯುದೇವನೆ ಮಧ್ವರ ಅವತಾರವೆತ್ತಿದ. ವಾಯುವಿನ ಮೂರು ಅವತಾರಗಳಾದ ಹನುಮ–ಭೀಮ–ಮಧ್ವರ ಮಹಿಮೆಯನ್ನು ದಾಸರು ಹೇಳಿರುವ ಬಗೆ ನೋಡಿ :

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣ ಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| | (ರೂ 6–50 ಶುಲ್ಕದಿಂದ 4 ಮಂದಿಗೆ ಅನುಮತಿ) | |
| ನಿತ್ಯ ಅರ್ಚನೆ | ಬೆಳಗ್ಗೆ 5–00 ರಿಂದ 5–15 | ಬೆಳಗ್ಗೆ 6–00 ರಿಂದ 6–15 |
| | (ರೂ 150/- ವಾರ್ಷಿಕ ಶುಲ್ಕ ನೀಡಿದ ಗೃಹಸ್ಥರನ್ನು ಅನುಮತಿಸಲಾಗುವುದು) | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–15 ರಿಂದ 6–15 |
| ಸರ್ವದರ್ಶನ | ,, 5–45 ರಿಂದ 7–00 | ,, 6–15 ರಿಂದ 1–00 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| | ( ರೂ 100/- ಶುಲ್ಕದಿಂದ ಇಬ್ಬರಿಗೆ ಅನುಮತಿ ) | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 1–00 ರಿಂದ 1–30 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 1–30 ರಿಂದ 7–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/- ಗೃಹಸ್ಥರಿಗೆ 5 ಗ್ರಾಂಗಳ ಬೆಳ್ಳಿಯ ಪದಕ ಬಹೂಕರಣವಿದೆ) | — |
| ರಾತ್ರಿ ಗಂಟೆ | ರಾತ್ರಿ 7–00 ರಿರಿದ 8–30 | ರಾತ್ರಿ 7–00 ರಿಂದ 7–30 |
| ಸರ್ವದರ್ಶನ | — | ,, 7–30 ರಿಂದ 8–30 |
| ಏಕಾಂತಸೇವೆ | ,, 8–30 ರಿಂದ 9–00 | ,, 8–30 ರಿಂದ 9–00 |

**ಪೇಷ್ಕಾರ್.**

ವಾಯು ಹನುಮದ್ಭೀಮರಾಯ
ಮಧ್ವರ ಸ್ತೋತ್ರ
ಬಾಯೊಳುಳ್ಳವಗೆ ಜನ್ಮಾದಿ ಜನ್ಮಾದಿ
ರೋಗಭಯವೀಯನೆಂದೆಂದು ಭಗವಂತ

ಇಷ್ಟಲ್ಲದೆ, ವಾಯುವಿನ ಮೂರು ಅವತಾರಗಳನ್ನೂ ಪ್ರತ್ಯೇಕವಾಗಿ ಸ್ತುತಿಸಿ, 'ಶ್ರೀಪತಿಯ ಧ್ಯಾನದಸುಖ'ವನ್ನು ಕರುಣಿಸಬೇಕೆಂದು ಜಗನ್ನಾಥದಾಸರು ಕೇಳಿಕೊಳ್ಳುತ್ತಾರೆ.

ವಾಯು ಬ್ರಹ್ಮರ ಸ್ತೋತ್ರದನಂತರ ದಾಸರು ಹರಿಪತ್ನಿಯರಾದ ಲಕ್ಷ್ಮಿ ಹಾಗೂ ತುಲಸಿಯಸ್ತುತಿ ಮಾಡಿದ್ದಾರೆ. ತುಲಸಿಯ ಜನನವನ್ನು ಕುರಿತು ಹೇಳುವಾಗ ದಾಸರು ಪುರಾಣ ಪ್ರಸಿದ್ಧವಾಗಿರುವ ಕಥೆಯನ್ನು ಹಿನ್ನೆಲೆಯಾಗಿ ಬಳಸಿದ್ದಾರೆ. ಅಮೃತ ಮಥನ ಸಂದರ್ಭದಲ್ಲಿ ಉದ್ಭವವಾದ ಅಮೃತ ಕಲಶವನ್ನು ಆನಂದದಿಂದ ವಿಷ್ಣು ಕೈಗೆ ತೆಗೆದು ಕೊಂಡಾಗ ಆತನ ಕಣ್ಣುಗಳಿಂದ ಮಿಡಿದ ಆನಂದ ಭಾಷ್ಪಗಳು ಆ ಕಲಶದಲ್ಲಿ ಬಿದ್ದು ಒಂದು ಸಣ್ಣ ಗಿಡವಾಯಿತಂತೆ. ಆಗಿಡದ ತುಲನೆ ಮಾಡಲಾಗದ ಸೌಂದರ್ಯಕ್ಕೆ ಮರಳಾದ ವಿಷ್ಣು, ತುಲಸಿಯೆಂದು ಹೆಸರಿಟ್ಟು ಲಕ್ಷ್ಮಿಯೊಂದಿಗೆ ಆಕೆಯನ್ನು ವಿವಾಹವಾದನಂತೆ–ಈ ಪೌರಾಣಿಕ ಕಥೆಯನ್ನೆ ಹೇಳುವ ಕೆಳಗಿನ ತ್ರಿಪದಿಯನ್ನು ನೋಡಿ

ಜಲಜಾಕ್ಷನಮಲ ಕಜ್ಜ ಲ ಬಿಂದು ಪೀಯೂಷ
ಕಲಶದಲಿ ಬೀಳೆ ಜನಿಸಿದಿ ಜನಿಸಿದಿ
ಹರಿಯಿಂದ ಶ್ರೀ
ತುಲಸಿ ನೀನೆಂದು ಕರೆಸಿದಿ

ಎಲ್ಲ ವಸ್ತುಗಳಿದ್ದೂ ತುಳಸಿಯಿಲ್ಲದ ಪೂಜೆಯನ್ನು ಶ್ರೀಹರಿ ಒಲ್ಲ ಎಂಬ ಪುರಂದರದಾಸರ ದಾಸರ ಮಾತು ತುಲಸಿಯ ಮಹತ್ತ್ವ ಎಷ್ಟೆಂಬುದನ್ನು ಸೂಚಿಸುತ್ತದೆ. ಪರಮಾತ್ಮನ ಹೆಚ್ಚು ರೂಪಗಳು ತುಲಸಿಯಲ್ಲಿ ಎದ್ದು ಕಾಣುತ್ತವಂತೆ. ತುಲಸಿಯ ಹಿರಿಯೆಯನ್ನು ಕುರಿತ ಈ ತ್ರಿಪದಿಯನ್ನು ನೋಡಿ :

ಕಲುಷ ವರ್ಜಿತೆ ನಿನ್ನ ದಳಗಳಿಂದಲಿ ಲಕ್ಷ್ಮೀ
ನಿಲಯನಂಘ್ರಿಗಳನ್ನು ಪೂಜಿಪ ಪೂಜಿತರಿಗೇ
ಪುಮ ಮಂ
ಗಳ ಪದವಿತ್ತು ಸಲಹುವಿ

ಇಷ್ಟು ಮಾತ್ರವಲ್ಲ, ಭಕ್ತರ ಮನದಲ್ಲಿ ಹರಿನೆಲೆ ನಿಲ್ಲಲು ಸಹಾಯಕಳಾಗುವವಳು ತುಳಸಿ ಮಾತೆಯೇ.

ದ್ವೈತ ಸಿದ್ಧಾಂತದಲ್ಲಿ ಹರಿಪತ್ನಿಯಾದ ಲಕ್ಷ್ಮಿಗೆ ಅತ್ಯಂತ ಉನ್ನತ ಸ್ಥಾನವಿದೆ. ಹರಿಯು

ನಂತರದ ಸ್ಥಾನವೇ ಅವಳದು. ಈಕೆ ಶ್ರೀಹರಿಯ ಕ್ರಿಯಾಚೈತನ್ಯ. ಹರಿಯ ಅವತಾರಗಳನ್ನು ಅನುಸರಿಸುತ್ತಾಳೆ. ಸಕಲ ಜೀವಿಗಳಿಗೂ ಈಕೆಯೇ ತಾಯಿ. ಅಪ್ರಾಕೃತ ಸತ್ತ್ವ, ರಜ ತಮೋಗುಣಗಣಗಳಿಂದ ಶ್ರೀ ಭೂದುರ್ಗಾರೂಪಗಳನ್ನು ಧರಿಸಿ ಪ್ರಕೃತಿ ನಿರ್ಮಿತವಾದ ಬ್ರಹ್ಮಾಂಡದಲ್ಲಿ ಪ್ರವೇಶಿಸಿ ಪರಮಾತ್ಮನ ಸಂಕಲ್ಪದಂತೆ ಜೀವರನ್ನು ಪ್ರೇರಿಸುತ್ತಾಳೆ. ಚೇತನಾಚೇತನಗಳ ನಿಯಾಮಕಳಾದ ಆಕೆ ಈಶವರ್ಗಕ್ಕೆ ಸೇರಿದವಳು. ಲಕ್ಷ್ಮಿಯ ಕೃಪಾವಲೋಕನದಿಂದ ಬ್ರಹ್ಮಾದಿ ದೇವರುಗಳು ಕೃತ ಕೃತ್ಯರಾಗಿದ್ದಾರೆ. ಸಕಲದೋಷ ವಿವರ್ಜಿತಳೂ, ವರದಾಯಕಿಯೂ, ದುಃಖದೂರಳೂ, ನಿತ್ಯಮುಕ್ತಳೂ ಆದ ಲಕ್ಷ್ಮಿಯನ್ನು ದಾಸರು ಸ್ತುತಿಸಿರುವ ಬಗೆಯಿದು.

ಈಶಕೋಟಿಪ್ರವಿಷ್ಟೆ, ಈಶಭಿನ್ನಳೆ ಸರ್ವ
ದೋಷವಿವರ್ಜಿತಳೆ ವರದೇಶೆ । ವರದೇಶೆ
ಪತಿಯೊಡನೆ
ವಾಸವಾಗೆನ್ನ ಮನದಲ್ಲಿ ॥

ಹರಿಯ ಸಕಲಾಭರಣಗಳೂ ಲಕ್ಷ್ಮಿಯೇ. ಪ್ರಳಯ ಕಾಲದಲ್ಲಿ ಶ್ರೀಹರಿಯ ಆಲಿಂಗನದಲ್ಲಿದ್ದು ಅವನನ್ನು ರಮಿಸಿದವಳು ಆಕೆಯೇ. ಸದಾಕಾಲದಲ್ಲೂ ಹರಿಸೇವೆಯಲ್ಲೇ ತೊಡಗಿರುವ ಈಕೆಯ ಹರಿಪ್ರೀತಿಯ ಮುಂದೆ ಉಳಿದ ದೈವಗಳು ನಿಲ್ಲುವಂತಿಲ್ಲ. ಅವಿಯೋಗಿಯೆನಿಸಿಕೊಂಡಿರುವ, ಪ್ರತಿಕ್ಷಣದಲ್ಲೂ ಹರಿಗೆ ಬೇಕಾದ ಲಕ್ಷ್ಮಿಯ ಚಿತ್ರವಿದು:

ಆನಂದಮಯ ಹರಿಗೆ ನಾನಾಭರಣವಾದೆ
ಪಾನೀಯವಾದೆ ಪಟವಾದೆ । ಪಟವಾದ
ಪಂಕಜ
ಪಾಣಿ ನೀನೆಮಗೆ ದಯವಾಗೆ ॥

'ಅಕ್ಷಯ ಜ್ಞಾನಿ'ಯೂ, 'ಸುಖಪೂರ್ಣೆ'ಯೂ ಆದ ಮಹಾಮಹಿಮಳನ್ನು ಜಗನ್ನಾಥರು ಕೇಳುವುದಿಷ್ಟೆ: "ಶ್ರೀ ಜಗನ್ನಾಥ ವಿಠ್ಠಲನಿಂದ ಕೂಡಿ ಮನದಲ್ಲಿ ವಾಸವಾಗೆಲ್ಲ ಕಾಲದಲಿ ಅವಿಯೋಗಿ".

ತುಳಸಿ ಲಕ್ಷ್ಮಿಯರ ಸ್ತುತಿಯನಂತರ ಹರಿಯ ದಶಾವತಾರದ ಕಥನಮಾಡಲಾಗಿದೆ. ಹರಿಯ ಲೀಲೆಗಳಲ್ಲಿ ದಶಾವತಾರವನ್ನು ಹಾಡಿಹೊಗಳದ ದಾಸರೇ ಇಲ್ಲವೆನ್ನಬಹುದು. ಮತ್ಸ್ಯ, ಕೂರ್ಮ, ವರಾಹಾದಿ ದಶಾವತಾರಗಳ ಸ್ತೋತ್ರವನ್ನು ಜಗನ್ನಾಥರು ಭಕ್ತಿಪೂರ್ವಕವಾಗಿ ಮಾಡಿ ಹರಿಯ ಔನ್ನತ್ಯವನ್ನೆತ್ತಿ ಹಿಡಿದಿದ್ದಾರೆ. ಈ ಸ್ತುತಿಯನಂತರ ವೆಂಕಟೇಶ ಹಾಗೂ ಶ್ರೀನಿವಾಸರ ಸ್ತೋತ್ರ ಮಾಡಲಾಗಿದೆ.

ಶ್ರೀನಿವಾಸರ ಸ್ತೋತ್ರದ ಭಾಗ ಇಡೀ ಕೃತಿಯಲ್ಲಿ ಬಹಳ ದೊಡ್ಡ ಭಾಗ. ಅಧ್ಯಾಯದ ಶೀರ್ಷಿಕೆಗೆ ಶ್ರೀನಿವಾಸನೆಂದು ಹೆಸರಿಟ್ಟಿದ್ದರೂ, ಸ್ತುತಿಸುವ ಭರದಲ್ಲಿ, ಕ್ಷಣಮಾತ್ರದಲ್ಲಿ ಅವನು ಹರಿಯಾಗಿ ಬಿಟ್ಟಿದ್ದಾನೆ. ಈ ಸ್ತೋತ್ರಭಾಗದಲ್ಲಿ ಜಗನ್ನಾಥರ ಹರಿಭಕ್ತಿ ನಿರರ್ಗಳವಾಗಿ ಸಾಗಿದೆ. ಈ ಭಾಗದಲ್ಲಿ ಪ್ರಕಟವಾಗುವ ದಾಸರ ದೈವಪ್ರೇಮ, ದೀನಭಾವಗಳು ಓದುಗರನ್ನೂ ಭಕ್ತಿಭಾವದಲ್ಲಿ ಮುಳುಗಿಸಿಬಿಡುತ್ತವೆ. ದ್ವೈತಮತದ ಬಹು ಮುಖ್ಯವಾದ ಕೆಲವು ತತ್ತ್ವಗಳು ಶ್ರೀನಿವಾಸ ಸ್ತೋತ್ರದ ಹಿನ್ನೆಲೆಯಲ್ಲಿ ಧಾರಾಳವಾಗಿ ಕೆಲಸಮಾಡಿವೆ.

ಹರಿ ಸಕಲರಿಗೂ ಒಡೆಯ. ಜೀವರು ಅವನ ದಾಸರು; ಪರಮಾತ್ಮನೊಬ್ಬನೇ ಸ್ವತಂತ್ರ, ಉಳಿದವರು ಅಸ್ವತಂತ್ರರು. ಸಕಲ ಕ್ರಿಯೆಗಳನ್ನು ಹರಿ ತಾನು ಮಾಡಿ, ಇತರರಿಂದ ಮಾಡಿಸುತ್ತಾನೆಂಬ ತತ್ತ್ವವನ್ನೊಳಗೊಂಡ ಈ ತ್ರಿಪದಿಗಳನ್ನು ನೋಡಿ.

ಏಸೇಸು ಜನ್ಮದಲಿ ದಾಸ ನಾ ನಿನಗಯ್ಯ
ಈಶ ನೀನೆಂಬೊ ನುಡಿ ಸಿದ್ಧ ।
ನುಡಿ ಸಿದ್ಧವಾಗಿರಲು
ದಾಸೀನ ಮಾಡೋದುಚಿತಲ್ಲ ॥

ನಿಲ್ಲಲು ನಿಲುವೆ ಕುಳಿತು ಮಲಗಿದರೆ
ಮಲಗುವೆನು
ತಿಳಿದು ತಿಳಿದರೆ ತಿಳಿವೆನೊ । ತಿಳಿವೆನೊ
ದೇಹದ ನೆ
ರಳಂತೆ ಇಪ್ಪೆನೊ ಅನುಗಾಲ ॥

ಸರ್ವೋತ್ತಮನೂ, ಸಕಲ ದೇವತೆಗಳ ಒಡೆಯನೂ ಆದ ಹರಿ ಸರ್ವಕಾಲದಲ್ಲೂ ಸರ್ವರನ್ನೂ ರಕ್ಷಿಸುತ್ತಾನೆ.

ಸರ್ವೇಶ ಸರ್ವಜ್ಞ ಸರ್ವಾಂತರಾತ್ಮಕನೆ
ಶರ್ವಾದಿ ವಂದ್ಯ ಶಿವರೂಪಿ । ಶಿವರೂಪಿ
ಸರ್ವಕಾಲದಲಿ ಸಲಹಯ್ಯ ॥

ಶುದ್ಧ ಭಕ್ತಿಯಿಂದ ಪರಮಾತ್ಮನನ್ನು ಸ್ತುತಿಸಿದರೆ, ಭಕ್ತನ ಬಳಿಯೇ ಪರಮಾತ್ಮನಿರುತ್ತಾನೆಂಬ ತತ್ತ್ವವನ್ನು ಸಾರುವ ಈ ತ್ರಿಪದಿಯನ್ನು ನೋಡಿ:

ಹೃದಯದಲಿ ತವರೂಪ ವದನದಲಿ ತವನಾಮ
ಉದರದಲಿ ನೈವೇದ್ಯ ಶಿರದಲ್ಲಿ । ಶಿರದಲ್ಲಿ
ನಿರ್ಮಾಲ್ಯ
ಪದಜಲಗಳಿರಲು ಭಯವುಂಟೆ ?

ಸದಾನಂದಮಯನೂ, ನಿರ್ದೋಷಿಯೂ, ಗುಣಪೂರ್ಣನೂ ಆದ ಪರಮಾತ್ಮ ಅಣುವಿನಲ್ಲಿ ಅಣುವಾಗಬಲ್ಲ, ಮಹತ್ತಾಗಬಲ್ಲ, ನಿರ್ಗುಣನಾಗಬಲ್ಲ, ಸಗುಣನಾಗಬಲ್ಲ, ವ್ಯಕ್ತನಾಗಬಲ್ಲ:

ಅಣುವಿಗಣುತರನಾಗಿ ಘನಕೆ ಘನತರವಾಗಿ
ಅಣುಮಹತ್ತುಗಳ ದೆಸೆಯಿಂದ ।
ದೆಸೆಯಿಂದ ನೀ ವಿಲ
ಕ್ಷಣನೆನಿಸಿಕೊಂಬಿ ಶ್ರುತಿಯೊಳು ॥

ನಯವಾದ ನಿಂದನೆಯ ಮೂಲಕ, ಶ್ರೀನಿವಾಸನ ಕರುಣೆಯ ಪರಮಾವಧಿಯನ್ನು ಸೂಚಿಸುವ ಕೆಳಗಿನ ಪದ್ಯವನ್ನು ನೋಡಿ :

ಅಚ್ಯುತನೆ ನಿನ್ನಂಥ ಹುಚ್ಚು ದೊರೆಯನು
ಕಾಣೆ
ಕಚ್ಚಿ ಬೈದೊದ್ದ ಭಕುತರ । ಭಕುತರಪರಾಧಗಳ
ತುಚ್ಛಗೈದವರ ಸಲಹೀದೆ ॥

ಶ್ರೀನಿವಾಸನಲ್ಲಿ ದಾಸರಿಗಿರುವ ಆತ್ಮೀಯತೆ, ಸಲಿಗೆ ಎಂತಹುದೆಂಬುದಕ್ಕೆ ಹೃದಯಸ್ಪರ್ಶಿಯಾದ ಮುಂದಿನ ಪದ್ಯವೇ ಉತ್ತಮ ಉದಾಹರಣೆಯಾಗಿದೆ. ದ್ವೈತದ ಹಿನ್ನೆಲೆಯ ಸಾಹಿತ್ಯದ ಸರಳ ಸುಭಗರೂಪ ಇಲ್ಲಿದೆ :

ಎನ್ನಪ್ಪ ಎನ್ನಮ್ಮ ಎನ್ನಯ್ಯ ಎನ್ನರಸ
ಎನ್ನಕುಲದೈವ ಸುಖದೋರೋ ।
ಸುಖದೋರೊ ಇಹಪರದಿ
ಎನ್ನ ಬಿಟ್ಟಗಲದಿರು ಕಂಡ್ಯ ॥

ಅನ್ನಮಯನೂ, ಪ್ರಾಣಮಯನೂ, ಮನೋಮಯನೂ ಆದ ಶ್ರೀಹರಿ ಮಾತ್ರ ಮುಕ್ತಿಮಾರ್ಗಕ್ಕೆ ಸೋಪಾನವಾದ ಜ್ಞಾನವನ್ನು ನೀಡಬಲ್ಲವನಾದ್ದರಿಂದ "ಭಕ್ತಿ, ಜ್ಞಾನ, ವೈರಾಗ್ಯ"ವನ್ನು ಕರುಣಿಸೆಂದು ದಾಸರು ಹರಿಯನ್ನು ಧೈರ್ಯವಾಗಿ ಕೇಳಿದ್ದಾರೆ.

(24 ನೇ ಪುಟ ನೋಡಿ)



ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಗೆ ಪ್ರಪಂಚದಲ್ಲೇ ಅತಿ ವಿನೂತನವಾದ ವಜ್ರಕಿರೀಟ ವನ್ನು ತಿ. ತಿ. ದೇ. ಸಜ್ಜಗೊಳಿಸಿದೆ. ಈ ವಜ್ರ ಕಿರೀಟದ ಬೆಲೆ ಸುಮಾರು 6 ಕೋಟಿ ರೂಗಳು. 26 ಕಿಲೋಗ್ರಾಂ ತೂಕದ ಅಪರಂಜಿ ಬಂಗಾರದ ಈ ಕಿರೀಟದಲ್ಲಿ 28369 ವಜ್ರಗಳು ಸೇರಿದ್ದು. ಬೆಂಗಳೂರಿನ ಸೂರಜ್‌ಮಲ್ಸ್ ಕಂಪನಿಯವರು ಇದರ ನಿರ್ಮಾಣಕಾರ್ಯವನ್ನು ಯಶಸ್ವಿಯಾಗಿ ಸಿದ್ಧಾರೆ.

ಈ ಹೊಸ ವಜ್ರಕಿರೀಟ ಡಿಸೆಂಬರ್ 20 ರಂದು ಶುಕ್ರವಾರ ತಿರುಮಲೆಯಲ್ಲಿ ಸ್ವಾಮಿಗೆ ಸಮರ್ಪಿತ ವಾಯಿತು.

ಅದಕ್ಕೂ ಮೊಲು ಡಿಸೆಂಬರ್ 19 ರಂದು ತಿ. ತಿ. ದೇ. ಪರಿಪಾಲನಾಭವನದಲ್ಲಿ ಭಕ್ತಾದಿಗಳ ವಜ್ರಕಿರೀಟ ದರ್ಶನಕ್ಕಾಗಿ ಏರ್ಪಾಡು ಮಾಡ ಲಾಗಿದ್ದಿತು. ಬೆಳಗ್ಗೆ 10 ರಿಂದ ಸಂಜೆ 4 ರವರೆಗೆ ಸಹಸ್ರಾರು ಮಂದಿ ಭಕ್ತರು ವಜ್ರಕಿರೀಟವನ್ನು ನೋಡಿ ಆನಂದಿಸಿದರು.

ಅಂದು ಸಂಜೆ 5–30ಕ್ಕೆ ಕಿರೀಟವನ್ನು ತಿರುಪತಿಯ ನಗರ ಬೀದಿಗಳಲ್ಲಿ ಮೆರವಣಿಗೆಯಲ್ಲಿ ತೆಗೆದುಕೊಂಡು ಹೋಗಲಾಯಿತು. ವೇದಪಂಡಿತರ ಮಂತ್ರೋಚ್ಚಾರಣೆಗಳ, ಭಕ್ತರ ಗೋವಿಂದ ನಾಮಸ್ಮರಣೆಯ ಘೋಷಣೆಗಳ, ಭಜನ ಮಂಡಲಿ ಗಳ ಸಾಮೂಹಿಕ ಭಜನೆಗಳ ಹಾಗೂ ಮೇಳ ತಾಳಗಳ ಸುಶ್ರಾವ್ಯ ಸಂಗೀತಗಳ ನಡುವೆ ಅತಿ ವೈಭವದಿಂದ ಸಕಲ ರಕ್ಷಣಾಬಳಗದೊಡನೆ ತಿ. ತಿ. ದೇ. ಅಧಿಕಾರಿಗಳ, ಬೋರ್ಡ್‌ಸದಸ್ಯರ, ಉತ್ಸವ ಪರ್ಯವೇಕ್ಷಣೆಯಲ್ಲಿ ಲಕ್ಷಾಂತರ ಮಂದಿ ಭಕ್ತಿ ಪ್ರಪತ್ತಿಗಳಿಂದ ಕಿರೀಟವನ್ನು ದರ್ಶಿಸಿ, ಮಂಗಳಾರತಿ ಬೆಳಗಿ ಕಿರೀಟವನ್ನು ಸ್ವಾಗತಿಸಿದರು. ಸುಮಾರು ಐದು ಗಂಟೆಗೂ ಹೆಚ್ಚು ಹೊತ್ತು ನಡೆದ ಈ ಕಿರೀಟದ ಮೆರವಣಿಗೆಯು ಉತ್ಸವ ರಾತ್ರಿ 10 ಗಂಟೆಗೆ ಅಲಿಪಿರಿಯನ್ನು ತಲುಪಿತು. ಅಲ್ಲಿಗೆ ಸಮಯಕ್ಕೆ ಸರಿಯಾಗಿ ಆಗಮಿಸಿದ ಆಂಧ್ರ

---

ಕಿರೀಟ ಕಾರ್ಯಾಗಾರ ಚಿತ್ರಗಳು:
ಮೇಲಿನಿಂದ ಕೆಳಕ್ಕೆ

ಬೋರ್ಡ್ ಸದಸ್ಯರಾದ ಶ್ರೀ ಟಿ. ರುದ್ರಯ್ಯ ಹಾಗೂ ಶ್ರೀ ಆರ್. ಸತ್ಯನಾರಾಯಣ ಅವರ ಪರಿಶೀಲನೆ ಕಾರ್ಯಾಗಾರದಲ್ಲಿ ಕಾರ್ಯನಿರತ ಕೆಲಸ ಗಾರರು. ಕುಶಲ ಕೆಲಸಗಾರರು ಹಾಗೂ ಅಧಿಕಾರಿಗಳ ಒಂದು ಸಾಮೂಹಿಕ ಚಿತ್ರ. ಬೋರ್ಡ್ ಸದಸ್ಯ ಶ್ರೀ ಪಿ. ವೆಂಕಟೇಶ್ವರುಲು ಅವರಿಂದ ಕಾರ್ಯಕ್ಷಮತೆಯ ಪರಿಶೀಲನೆ.

---

## ಶ್ರೀ ವೆಂಕಟೇಶ್ವರಸ್ವಾಮಿಗೆ

# ನೂತನ ವಜ್ರ ಕಿರೀಟ

ಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್, ಆಂಧ್ರಪ್ರದೇಶದ ದೇವಾದಾಯ ಇಲಾಖಾಮಂತ್ರಿ ಶ್ರೀ ಎನ್. ಯತಿರಾಜಾರಾವ್ ದೇವಸ್ಥಾನದ ಬೋರ್ಡ್ ಅಧ್ಯಕ್ಷ ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣರಾಜು ಮುಂತಾದವರು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರಿಂದ ಸ್ವಾಗತಿಸಲ್ಪಟ್ಟು ಕಿರೀಟದ ಅರ್ಚನೆಯಲ್ಲಿ ಭಾಗವಹಿಸಿದರು. ನಂತರ ಕಿರೀಟವನ್ನು ಬೆಟ್ಟಕ್ಕೆ ವಾಹನದಲ್ಲಿ ಕೊಂಡೊಯ್ಯಲಾಯಿತು. ತಿರುಮಲೆಯಲ್ಲಿ ಪುರ ವೀಧಿ ಮೆರವಣಿಗೆಯಲ್ಲಿ ಸಹಸ್ರಾರು ಮಂದಿ ಭಕ್ತರು ಕಿರೀಟವನ್ನು ದರ್ಶಿಸಿದರು.

ಡಿಸೆಂಬರ್ 20ರ ಬೆಳಗ್ಗೆ ಸ್ವಾಮಿಯ ಅಭಿಷೇಕಾನಂತರ ಮುಖ್ಯಮಂತ್ರಿ ಎನ್. ಟಿ. ರಾಮರಾಯರು ಸ್ವಾಮಿಸಮಕ್ಷಮದಲ್ಲಿ ಪ್ರಧಾನ ಅರ್ಚಕರಿಗೆ ವಜ್ರಕಿರೀಟವನ್ನು ನೀಡಿದರು. ವೇದ ಪಂಡಿತರ ಮಂತ್ರಘೋಷದ ನಡುವೆ ಆಗಮೋಕ್ತ ವಾದ ರೀತಿಯಲ್ಲಿ ಸ್ವಾಮಿಯನ್ನು ಹೊಸ ವಜ್ರ ಕಿರೀಟದಿಂದ ಅಲಂಕರಿಸಲಾಯಿತು. ಅನಂತರ ನೂತನ ವಜ್ರಕಿರೀಟಧಾರಿ ಶ್ರೀನಿವಾಸನನ್ನು ಮುಖ್ಯಮಂತ್ರಿಯವರು ಆರಾಧಿಸಿದರು. ಅವರನ್ನು ಸ್ವಾಮಿಯ ಶೇಷವಸ್ತ್ರದಿಂದ ಸನ್ಮಾನಿಸಲಾಯಿತು.

ಶ್ರೀ ವೆಂಕಟೇಶ್ವರಸ್ವಾಮಿಯ ಹೊಸ ವಜ್ರ ಕಿರೀಟಾಲಂಕರಣದ ನೆನಪಿನ ವಿಶೇಷ ಸಂಚಿಕೆ 'ದಿ ಕ್ರೌನ್ ಡಿವೈನ್' (ಆಂಗ್ಲ) ಅನ್ನು ಶ್ರೀ ಎನ್. ಟಿ. ರಾಮರಾಯರು ಬಿಡುಗಡೆ ಮಾಡಿದರು.

ವಜ್ರಕಿರೀಟ ನಿರ್ಮಾಣದಲ್ಲಿ ಅಹರ್ನಿಶಿ ಶ್ರಮಿಸಿದ ಕೆಲಸಗಾರರಿಗೆ ಮುಖ್ಯಮಂತ್ರಿಗಳು ವಸ್ತ್ರ ಹಾಗೂ ಸ್ವಾಮಿಯವರ ಚಿತ್ರದ ಬಂಗಾರದ ಪದಕಗಳನ್ನು ನೀಡಿ ಸತ್ಕರಿಸಿದ್ದೇ ಅಲ್ಲದೆ, ವಜ್ರ ಕಿರೀಟ ನಿರ್ಮಾಣದ ಪ್ರಧಾನ ಪರ್ಯವೇಕ್ಷಕರು ಹಾಗೂ ಸೂರಜಮಲ್ಸ್ ಕಂಪನಿಯ ನೇತಾರರಿಗೆ ಶ್ರೀ ವೆಂಕಟೇಶ್ವರಸ್ವಾಮಿ ಶೇಷವಸ್ತ್ರವನ್ನೂ ಬಹುಮಾನಿಸಿದರು.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದಾಗ, ಮಾವ ಆಕಾಶರಾಜನು ಅಳಿಯ ಶ್ರೀ ವೆಂಕಟೇಶ್ವರಸ್ವಾಮಿಗೆ ಸೂರ್ಯಕಠಾರಿಯನ್ನೂ, ಬಂಗಾರದ ಕಿರೀಟವನ್ನೂ ಬಹುಮಾನಿಸಿದ ಎಂದು ವೆಂಕಟಾಚಲ ಮಹಾತ್ಮೆ ವಿವರಿಸುತ್ತದೆ. ತದನಂತರ ಇತಿಹಾಸಕಾಲದಲ್ಲಿ ಶ್ರೀ ಕೃಷ್ಣದೇವರಾಯನು 1513ರಲ್ಲಿ ಸ್ವಾಮಿಗೆ ಒಂದು ಚಿನ್ನದ ಕಿರೀಟವನ್ನು ಸಮರ್ಪಿಸಿದನೆಂದು ತಿಳಿದುಬರುತ್ತದೆ. ಹತಿರಾಮಜೀಮಠದ ಮಹಂತ ಸೇವಾದಾಸಜೀಯವರು ಈ ಕಿರೀಟಕ್ಕೆ ಹಲವಾರು ಆಭರಣಗಳನ್ನು ಸೇರಿಸಿದರು. ಮಹಂತ ಪ್ರಯಾಗದಾಸಜೀ ಅವರು ಹೊಸದೊಂದು ಕಿರೀಟವನ್ನು ತಯಾರಿಸಲು ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡರೂ ಇದ್ದಕ್ಕಿದ್ದಂತೆ ಕಿರೀಟ ನಿರ್ಮಾಣ ಕಾರ್ಯವನ್ನು ಕೈಬಿಡಲಾಯಿತು. ಮತ್ತೆ 1945 ರಲ್ಲಿ ದೇವಾದಾಯ ಇಲಾಖೆಯ ವತಿಯಿಂದ ಹೊಸ ರತ್ನಖಚಿತ ಕಿರೀಟ ನಿರ್ಮಾಣವಾಯಿತು. ನಂತರ ರತ್ನಖಚಿತ ಕರ್ಣಪತ್ರಗಳು, ಶಂಖ, ಚಕ್ರ, ವರದ ಕಟಿ ಹಸ್ತಾಭರಣಗಳು ತಯಾರಾದವು.

ಹೊಸ ವಜ್ರಕಿರೀಟ ನಿರ್ಮಾಣಕ್ಕಾಗಿ ಬೆಲ್ಜಿಯಂನ ಆಂಟ್‌ವರ್ಪ್‌ನಿಂದ 27749 ವಜ್ರಗಳನ್ನು ಎರಡು ಕಂತುಗಳಲ್ಲಿ ಕೊಳ್ಳಲಾಯಿತು. ಬೆಲೆ ಸುಮಾರು 4.30 ಕೋಟಿ ರೂಗಳು. ಇವು ಸಾಲದೆ ಹೋಗಿ 1985ರ ಡಿಸೆಂಬರಿನಲ್ಲಿ ಸರ್ಕಾರಿ ಸ್ವಾಮ್ಯದ ಮೆಟಲ್ಸ್ ಆಂಡ್ ಮಿನರಲ್ಸ್ ಟ್ರೇಡಿಂಗ್ ಕಾರ್ಪೋರೇಶನ್ನಿನಿಂದ 22 ಲಕ್ಷ ರೂಗಳ ವಜ್ರಗಳನ್ನು ಕೊಳ್ಳಲಾಯಿತು. ತಿ. ತಿ. ದೇ. ಗಳ ಘೋಷಿತ ಸಂಗ್ರಹದಿಂದ 26 ಕೆ. ಜಿ. ತೂಕದ ಚಿನ್ನವನ್ನು ಬೊಂಬಾಯಿನ ಖಜಾನೆಯಲ್ಲಿ ಕರಗಿಸಿ ಬಳಸಲಾಯಿತು. ಬೆಂಗಳೂರಿನ ಸೂರಜ್‌ಮಲ್ ಡೈಮಂಡ್ಸ್ ಪ್ರೈ. ಲಿಮಿಟೆಡ್‌ನ ಯಜಮಾನರು ಈ ಕಿರೀಟವನ್ನು ಮಜೂರಿಯಿಲ್ಲದೆ ಮಾಡಿ ಕೊಡಲು ಮುಂದೆ ಬಂದರು (ಶ್ರೀ ಕುಮಾರ್ ಪಿ. ಮೆಹೆತಾ ಹಾಗೂ ಶ್ರೀ ದಿಲೀಪ್ ಪಿ. ಮೆಹೆತಾ) (ಇವರುಗಳ ತಾತನವರು 1945 ರಲ್ಲಿನ ಕಿರೀಟವನ್ನು ನಿರ್ಮಿಸಿದ್ದರು.) 40 ಮಂದಿ ಕುಶಲಕರ್ಮಿಗಳು ರಾತ್ರಿಹಗಲು ಏಕಪ್ರಕಾರವಾಗಿ ಮೇ 24 ರಿಂದ ಡಿಸೆಂಬರ್ 19 ರವರೆಗೆ ದುಡಿದು ಕಿರೀಟ



ತಿರುಮಲೆಯಲ್ಲಿ ವಜ್ರಕಿರೀಟದ ಮೆರವಣಿಗೆ



ತಿ. ತಿ. ದೇ. ಆಡಳಿತ ಪರಿಪಾಲನಾಭವನದಲ್ಲಿ ನೂತನ ವಜ್ರಕಿರೀಟವನ್ನು ಭಕ್ತರು ದರ್ಶಿಸುತ್ತಿರುವಿಕೆ.



ಸೂರಜ್‌ಮಲ್ಸ್ ಮಾಲೀಕರನ್ನು ಸ್ವಾಗತಿಸುತ್ತ ಶ್ರೀ ಎಸ್. ಲಕ್ಷ್ಮೀನಾರಾಯಣ.

ತಯಾರಿಯನ್ನು ಪೂರೈಸಿದರು. ತಿ. ತಿ.
ಬೋರ್ಡ್ ಅಧ್ಯಕ್ಷ ಶ್ರೀ ವಿ. ಕೆ. ಡಿ. ವಿ.
ನಾರಾಯಣರಾಜು, ಕಾರ್ಯನಿರ್ವಹಣಾಧಿಕ
ಶ್ರೀ ಎಸ್. ಲಕ್ಷ್ಮೀನಾರಾಯಣ, ತಿ. ತಿ.
ಬೋರ್ಡ್ ಸದಸ್ಯರು, ಕಾರ್ಯ ನಿರ್ವಹಣೆಯ
ಪರ್ಯವೇಕ್ಷಿಸಿದರು. ಆಂಧ್ರಪ್ರದೇಶದ ಮು
ಮಂತ್ರಿ ಶ್ರೀ ಎನ್. ಟಿ. ರಾಮರಾ
ದೇವಾದಾಯ ಇಲಾಖಾಮಂತ್ರಿ ಶ್ರೀ ಎ
ಯತಿರಾಜಾರಾವ್ ಮೊದಲಾದವರು ಕಿರಿ
ನಿರ್ಮಾಣ ಕಾರ್ಯಾಗಾರಕ್ಕೆ ಭೇಟಿ ನಿ
ಕೆಲಸದ ವಿಧಾನವನ್ನು ಪ್ರೋತ್ಸಾಹಿಸಿದ
ತಿ. ತಿ. ದೇ. ಉಪಕಾರ್ಯನಿರ್ವಹಣಾಧಿಕಾ
ಶ್ರೀ ಆರ್. ವಾಸುದೇವನಾಯ್ಡು ಅವರು ಕಿರಿ
ಕಾರ್ಯಾಗಾರದ ಉಸ್ತುವಾರಿ ವಹಿಸಿದ್ದರು.

ಬೆಳುದಿಂಗಳ ವರ್ಣದ ಈ ವಜ್ರಕಿರೀಟ ಪ
ಪರೆಯಲ್ಲಿ ನಾಲ್ಕನೆಯದು ಹಾಗೂ ಐತಿಹಾ
ವಾಗಿ ಮೂರನೆಯದೂ ಆಗಿ ಶ್ರೀ ವೆಂಕಟೇಶ್ವ
ಸ್ವಾಮಿಯಿಂದ ತಾನು ಅಲಂಕೃತಗೊಂ
ಭಕ್ತರನ್ನು ಅವನೆಡೆಗೆ ಸೆಳೆಯುತ್ತಿದೆ.

---

# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು (2 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ 6-30, ಬೆಳಗ್ಗೆ 10-30, ಸಂಜೆ 4-30

ಬಸ್ ಪ್ರಯಾಣದ ದರ ; ಒಂದು ಟಿಕೆಟ್ಟಿಗೆ 12 ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ.ತಿ.ದೇ**

## ಕಿಶೋರಜಗತ್

# ಸಂಜೆಯಲ್ಲಿ ಜ್ಞಾನೋದಯ

ಹಸ್ತಿನಾವತಿಯ ರಾಜಭವನಗಳ ಮೇಲೆಲ್ಲಾ ಬಂಗಾರದ ಹೊದಿಕೆ ಹಾಕಿದಂತೆ ಸೂರ್ಯಕಿರಣಗಳು ಎಲ್ಲೆಡೆಯಲ್ಲಿಯೂ ಪಸರಿಸಿದ್ದವು, ಮಹಾ ಸಾಮ್ರಾಟನಾದ ಧರ್ಮರಾಯನು ಅಂದಿನ ತನ್ನೆಲ್ಲಾ ರಾಜ್ಯ ಕಾರ್ಯಗಳನ್ನು ಮುಗಿಸಿಕೊಂಡು ಆದೇ ತಾನೇ ಸ್ವಗೃಹಕ್ಕೆ ಮರಳಿದ್ದ.

ಮಹಾಭಾರತದಲ್ಲಿಯೇ ಅತ್ಯಂತ ಧರ್ಮಪರಾಯಣ ಪ್ರಭು ಎಂದೆನಿಸಿಕೊಳ್ಳುತ್ತಿದ್ದ ಧರ್ಮರಾಯನನ್ನು ಭೇಟಿಯಾಗಲು ಬಹುದಿನಗಳಿಂದಲೂ ಕಡುಬಡವನಾದ ಪ್ರಜೆಯೊಬ್ಬನೂ ಪ್ರಯತ್ನ ಮಾಡುತ್ತಲಿದ್ದ. ಸಾಮ್ರಾಟನ ಅರಮನೆಯಲ್ಲಿ ಶ್ರೀ ಸಾಮಾನ್ಯನೊಬ್ಬನ ಪ್ರವೇಶ ಸುಲಭ ಸಾಧ್ಯ ವಿಷಯವೇ! ಆತನನ್ನಾರು ಕೇಳಬೇಕು? ಆದರೆ ಆ ಬಡವ ತನ್ನ ಪ್ರಯತ್ನವನ್ನೇನೂ ನಿಲ್ಲಿಸಲಿಲ್ಲ. ಆತನ ಸುದೈವವೇನೋ ಎಂಬಂತೆ ಒಂದು ದಿನ ದ್ವಾರಪಾಲಕರು ಉದಾರ ಮನಸ್ಸಿನಿಂದ ಆತನನ್ನು ಒಳಗೆ ಬಿಟ್ಟರು. ಬಹುದಿನಗಳ ಆತನ ಬಯಕೆ ಈಡೇರಿದುದಕ್ಕೆ ಆ ಬಡವನಿಗಂತೂ ಅಪರಿಮಿತ ಆನಂದವಾಗಿ ಹೋಗಿತ್ತು. ಆತ ಬಹುಭಕ್ತಿಯಿಂದ ಸಾಮ್ರಾಟರಿಗೆ ತನ್ನ ವಂದನೆಗಳನ್ನು ಸಲ್ಲಿಸಿದ. ಆಗ ಧರ್ಮರಾಜನು, 'ಅಪ್ಪಾ ನೀನಾರು? ನಮ್ಮಿಂದ ನಿನಗೇನಾಗಬೇಕಾಗಿದೆ' ಎಂದು ಪ್ರಶ್ನೆಮಾಡಿದ. ಆಗ ಆ ಬಡವನು–

"ಜೀಯ ಬಹುದಿನಗಳಿಂದಲೂ ತಮ್ಮ ದರ್ಶನವನ್ನು ಪಡೆದುಕೊಳ್ಳಲು ಅಪೇಕ್ಷಿಸುತ್ತಿದ್ದೆ. ತಮ್ಮ ಸಾಮ್ರಾಜ್ಯದಲ್ಲಿ ಬಾಳಿ ಬದುಕುವ ನಾನೊಬ್ಬ ಸಾಮಾನ್ಯ ಪ್ರಜೆಯಾಗಿರುವೆ. ಕಡುಬಡತನದಿಂದ ದಿನನಿತ್ಯದ ಸಂಸಾರವನ್ನು ಸಾಗಿಸುವುದೇ ಕಷ್ಟಸಾಧ್ಯವಾದ ಕೆಲಸವಾಗಿದೆ. ಅದರಲ್ಲಿ ಹಿರಿಯಳಾದ ಮಗಳು ಈಗ ವಿವಾಹಯೋಗ್ಯವಾಗಿದ್ದಾಳೆ. ಯೋಗ್ಯವರನನ್ನು ಹುಡುಕಿ ವಿವಾಹ ಮಾಡಬೇಕೆಂಬ ಹೆಬ್ಬಯಕೆಯಿಂದ ಸನ್ನಿಧಾನದ ಸಹಾಯವನ್ನಪೇಕ್ಷಿಸಿ ಬಂದಿದ್ದೇನೆ. ಪ್ರಭುಗಳು ನನ್ನ ಈ ಬಿನ್ನಹವನ್ನು ನಡೆಸಿಕೊಡಬೇಕಾಗಿ ಕೇಳಿಕೊಳ್ಳುತ್ತೇನೆ."

ಆತನ ಪ್ರಾರ್ಥನೆಯನ್ನು ಕೇಳಿದನಂತರ ಧರ್ಮರಾಜನು;

"ಅಪ್ಪಾ ನೀನು ಸ್ವಲ್ಪ ಮುಂಚಿತವಾಗಿ ಬಂದಿದ್ದರೆ ಖಂಡಿತವಾಗಿಯೂ ನಿನ್ನ ಪ್ರಾರ್ಥನೆಯನ್ನು ಈಡೇರಿಸಿಕೊಡುತ್ತಿದ್ದೆವು. ದಿನ ನಿತ್ಯದ ವ್ಯವಹಾರಗಳನ್ನು ಮುಗಿಸಿಕೊಂಡು ಈಗಾಗಲೇ ಎಲ್ಲರೂ ಹೊರಟು ಹೋಗಿದ್ದಾರೆ. ಆದುದರಿಂದ ನೀನು ನಾಳೆಯ ದಿನ ಬಂದರೆ ಖಂಡಿತವಾಗಿಯೂ ನಿನ್ನ ಕೆಲಸವನ್ನು ಪೂರೈಸಿಕೊಡುತ್ತೇವೆ."

ಯಾಚಕನಿಗೆ ಮಹಾರಾಜನು ಮಾತುಗಳನ್ನು ಕೇಳಿ ಮನಸ್ಸಿಗೆ ಬೇಸರವೆನಿಸಿತು. ಆದರೂ ತಾನೊಬ್ಬ ಪ್ರಜೆ, ಅಲ್ಲದೇ ಯಾಚಕನಾಗಿ ಬಂದವನು ಎಂಬ ಭಾವನೆಯಿಂದ ಯಾವ ಮಾತನ್ನೂ ಆಡದೇ ಧರ್ಮರಾಜನಿಗೆ ವಂದಿಸಿ ಮೌನವಾಗಿ ಹೊರಗೆ ಬಂದ.

"ಅಯ್ಯಾ ಪ್ರಭುಗಳು ನಿನಗೇನು ಹೇಳಿದರು"

"ನಾಳೆ ಬರಲುಅಪ್ಪಣೆ ಕೊಡಿಸಿದ್ದಾರೆ."

'ಹಾಗಾದರೆ ಸ್ವಲ್ಪ ನಿಲ್ಲು' ಎಂದು ನುಡಿದ ಭೀಮಸೇನನು ಸಮೀಪದಲ್ಲಿದ್ದ ಸೇವಕರನ್ನು ಕರೆದು ತಕ್ಷಣವೇ ವಿಜಯ ದುಂದುಭಿಯನ್ನು ಬಾರಿಸುವಂತೆ ಅಪ್ಪಣೆ ಮಾಡಿದ.

ರಾಷ್ಟ್ರದಲ್ಲಿ ಯಾವುದಾದರೊಂದು ವಿಶೇಷ ಸಂತೋಷದಾಯಕ ವಾರ್ತೆ, ಘಟನೆಗಳು ನಡೆದಾಗ ಆ ನಗಾರಿಯನ್ನು ಬಾರಿಸುವುದು ಸಂಪ್ರದಾಯವಾಗಿತ್ತು. ಅನಾಹತವಾಗಿ ಕೇಳಿಬರುತ್ತಿದ್ದ ಧ್ವನಿಯಿಂದ ಧರ್ಮರಾಜನಿಗೆ ಪರಮಾಶ್ಚರ್ಯವಾಯಿತು.



ತಕ್ಷಣವೇ ಆತನು ಸೇವಕರನ್ನು ಕಳುಹಿಸಿ ಭೀಮಸೇನನನ್ನು ಕರೆಯಿಸಿಕೊಂಡ. ಈ ವಿಜಯ ದುಂದುಭಿಯನ್ನೇಕೆ ಬಾರಿಸುತ್ತಿದ್ದಾರೆ ಎಂದು ಆತನಿಗೆ ಪ್ರಶ್ನೆಮಾಡಿದ, ಆಗ ಭೀಮಸೇನನು–

"ಮಹಾಪ್ರಭು ತಾವು ನಾಳಿನವರೆಗೂ ಬದುಕಿರುತ್ತೀರಿ ಎಂಬ ಸಂತೋಷದ ಮಾತನ್ನು ಈಗ ತಾನೆ ತಾವು ಹೊರಗೆ ಕಳಿಸಿದ ಯಾಚಕನಿಂದ ಕೇಳಿ ತಿಳಿದುಕೊಂಡೆ. ತಮ್ಮ ಬದುಕಿನ ಘಳಿಗೆಯನ್ನು ಕೇಳಿ ಪ್ರಜೆಗಳೆಲ್ಲರೂ ಸಂತೋಷಪಡಲಿ ಎಂಬ ಅಪೇಕ್ಷೆಯಿಂದಲೇ ಈ ದುಂದುಭಿಯನ್ನು ಬಾರಿಸುವಂತೆ ಹೇಳಿದ್ದೇನೆ."

ಬಲಭೀಮನ ಮಾತನ್ನು ಕೇಳಿದಾಗ ಧರ್ಮರಾಜನಿಗೆ ತಾನುಮಾಡಿದ ತಪ್ಪಿನ ಅರಿವಾಯಿತು. 'ಜನನ–ಮರಣಗಳೆರಡೂ ಜೀವಿಯ ಅಧೀನವಲ್ಲ. ಆದುದರಿಂದ ನಾಳೆ ಮಾಡಬೇಕಾದ ಒಳಿತನ್ನು ಇಂದೇ ಮಾಡಿ ಮುಗಿಸುವುದು ವಿಹಿತ. ನನ್ನ ಸೋದರನು ಸರಿಯಾದ ವೇಳೆಯಲ್ಲಿಯೇ ನನ್ನನ್ನು ಎಚ್ಚರಿಸಿದ' ಎಂದು ನೆನೆದು ಪುನಃ ಯಾಚಕನನ್ನು ಕರೆಯಿಸಿ ಕೈತುಂಬ ಧನವನ್ನಿತ್ತು ಕಳುಹಿಸಿದ.

ಮಹಾಭಾರತದ ಈ ಘಟನೆ ಪ್ರತಿಯೊಬ್ಬ ಭಾರತೀಯನಿಗೂ ಬೋಧಪ್ರದ ವಿಷಯವೆಂದೆನಿಸಿಕೊಳ್ಳುವುದು.

ಶ್ರೀ ಆದ್ಯರಾಮಾಚಾರ್ಯ

(19ನೇ ಪುಟದಿಂದ)

ಮುಂದೆ ಒಂದು ಅಧ್ಯಾಯದಲ್ಲಿ, ಶಕಟಾಸುರನ ವಧೆ, ಕಂಸವಧೆ ಇತ್ಯಾದಿ ಕೃಷ್ಣನ ವಿವಿಧ ಲೀಲೆಗಳನ್ನು ವರ್ಣಿಸಿ, ತಮ್ಮ ಜೀವನದ ಪ್ರಮುಖ ಧ್ಯೇಯವೇ ಶ್ರೀಹರಿಯ ಸೇವೆಮಾಡುವುದು ಎಂಬುದನ್ನು ಸುಂದರವಾಗಿ ಸೂಚಿಸಿದ್ದಾರೆ:

ಉಂಡು ಉಟ್ಟದ್ದೆಲ್ಲ ರಂಗಸೇವೆಯೆನ್ನಿ
ಕಂಡಕಂಡದ್ದು ಹರಿಪ್ರೀತಿಯೆನ್ನಿ ।
ಹರಿಪ್ರೀತಿಯೆನ್ನಿ ಮೂರ್ಲೋಕಕ್ಕೆ
ಪಾಂಡವ ಪ್ರಿಯನೆ ದೊರೆಯೆನ್ನಿ ।

ಜಗನ್ನಾಥದಾಸರ ಧಾರ್ಮಿಕ ದೃಷ್ಟಿಯಿದು :

ಮತದೊಳಗೆ ಮಧ್ವಮತ ವ್ರತದೊಳಗೆ ಹರಿದಿನವು
ಕಥೆಯೊಳಗೆ ಭಾಗವತಕಥೆಯೆನ್ನಿ । ಕಥೆಯೆನ್ನಿ ಮೂರ್ಲೋಕ
ಕತಿಶಯ ಶ್ರೀಕೃಷ್ಣನಪ್ರತಿಮನೆನ್ನಿ ॥

ಇಷ್ಟೆಲ್ಲ ವರ್ಣಿಸಿಯೂ, ಹರಿ ಸರ್ವೋತ್ತಮತೆಯನ್ನೂ, ಗುಣಾತಿಶಯಗಳನ್ನೂ ಸಾರಲು ಮತ್ತೊಂದು ಅಧ್ಯಾಯವನ್ನು ತಂದಿದ್ದಾರೆ. ಅದೇ ಶ್ರೀ ರುಕ್ಮಿಣೀವಿಲಾಸ. ಕೃತಿಯ ಉಳಿದ ಅಧ್ಯಾಯಗಳಲ್ಲಿ ದಾಸರು ಮಾಡಿರುವ ಸ್ತುತಿಗಿಂತ ಈ ಭಾಗದ ಸ್ತುತಿ ಬೇರೆಯಾಗಿದ್ದು ಕೃತಿಯ ತಂತ್ರವೇ ಇಲ್ಲಿ ಬದಲಾಗಿದೆ. ಕೃಷ್ಣ ರುಕ್ಮಿಣಿಯರ ಸರಸಸಂಭಾಷಣೆಯ ಮೂಲಕ ಹರಿಯ ಔನ್ನತ್ಯವನ್ನು ದಾಸರು ಹಾಡಿ ತೋರಿದ್ದಾರೆ. ಇಡೀ ತತ್ತ್ವಸುವಾಲಿಯಲ್ಲಿಯೇ ಆಕರ್ಷಕವಾಗಿ, ಸಹಜವಾಗಿ, ಜೀವಂತವಾಗಿ ಚಿತ್ರಿತವಾಗಿರುವ ಈ ಭಾಗದಲ್ಲಿನ ಕೃಷ್ಣ–ರುಕ್ಮಿಣಿಯರ ಸರಸ ಸಂಭಾಷಣೆಯ ಚಿತ್ರ ಮನಮೋಹಕವಾಗಿದೆ.

ರುಕ್ಮಿಣಿಯೊಂದಿಗೆ ಮಂಚದಮೇಲೆ ಕುಳಿತ ಹರಿಯು "ಹೇ ರಾಜಕನ್ನಿಕೆ! ಭೂರಮಣನಾನಲ್ಲ, ವಾರಿಧಿಯೊಳಗಿದ್ದು ಬದುಕುವಗೆ ಮರುಳಾದಿ ನಾರದನ ನುಡಿಗೆ ನಳಿನಾಕ್ಷಿ" ಎಂದು ರುಕ್ಮಿಣಿಯನ್ನು ಛೇಡಿಸುವ ದೃಶ್ಯದಿಂದ ಈ ಭಾಗ ಆರಂಭವಾಗುತ್ತದೆ. ಶಿಶುಪಾಲ ಮೊದಲಾದ ವಸುಧೆ ಪಾಲರನ್ನು ಬಿಟ್ಟು ಪಶುಪಾಲನಾದ ನನ್ನನ್ನೇಕೆ ವಿವಾಹವಾದೆ ಎಂದು ಹರಿ ಛೇಡಿಸಿದ್ದಕ್ಕೆ ರುಕ್ಮಿಣಿ ತೋರುವ ಪ್ರತಿಕ್ರಿಯೆ ಸೊಗಸಾಗಿದೆ :

ಈ ಮಾತ ಕೇಳಿ ಕೈ ಚಾಮರವ ನೀಡಾಡಿ
ಭೂಮಿಗೊರಗಿದಳು ಭುಗಿಲೆಂದು ।
ಭುಗಿಲೆಂದು ಮಲಗಿದ
ಕಾಮಿನಿಯ ಕಂಡ ಕಮಲಾಕ್ಷ ॥

ಸಲಿಗೆಯ ಮಾತನ್ನು ಹಾಸ್ಯವೆಂದರಿಯದೆ ಕಂಗೆಟ್ಟ ಆಕೆಯ ತಲೆಸವರಿ, ಮೇಲೆಬ್ಬಿಸಿ, ಸಮಾಧಾನಗೊಳಿಸುವ ಹರಿಯ ಚಿತ್ರ ಅತ್ಯಂತ ಸಹಜವಾಗಿದೆ :

ಕಂಗೆಟ್ಟಳೆಂದು ತನ್ನ ಅಂಗನೆಯ ಬಿಗಿದಪ್ಪಿ
ಮುಂಗುರುಳ ತಿದ್ದಿ ಮುದ್ದಿಸಿ ।
ಮುದ್ದಿಸಿ ಮಾತಾಡ್ದ
ಕಂಗಳಶ್ರುಗಳ ಒರೆಸುತ್ತ ॥

"ನಿನ್ನೊಳು ವಿನೋದವಮಾಡಲಷ್ಟು ವಿಷಾದ ಪಡಲ್ಯಾಕೆ ಅನುದಿನದಿ ಸ್ಮರಿಸುವರ ಕಾದುಕೊಂಡಿಹನೆ ಬಳಿಯಲ್ಲಿ" ಎಂದು ಕೃಷ್ಣ ರಮಿಸಿದಾಗ, ರುಕ್ಮಿಣಿ ಹಿಗ್ಗಿ ಹರ್ಷದಿಂದ ಅವನ ಪಾದಗಳಿಗೆರಗಿ ಹರಿಯ ಗುಣ, ಮಹತ್ತುಗಳನ್ನು ವರ್ಣಿಸಲಾರಂಭಿಸಿದಳು :

ಭಗವಂತ ನೀನು ದುರ್ಭಗ ದೇಹಗತರವರು
ತ್ರಿಗುಣ ವರ್ಜಿತವು ತವರೂಪ ।
ತವರೂಪಗುಣಗಳನು
ಪೊಗಳಲೆನ್ನಳವೆ ಪರಮಾತ್ಮ ॥

ಇಂತಹ ನೀನು ನನ್ನ ಪತಿಯಾಗಿರುವಾಗ ಶಿಶುಪಾಲರಂಥ ಸಾಮಾನ್ಯ ನೃಪರನ್ನು ಐದುವೆನೆ? ಎಂದು ಹರಿಗೇ ಸವಾಲೆಸೆದಳು. ರುಕ್ಮಿಣಿಯ ಬಿಚ್ಚುಮನದ ಮಾತಿಗೆ ಮರುಳಾದ ಹರಿ "ನಿನಗೆ ಎನ್ನಲಿ ಭಕುತಿ ಎನಿತಿಹುದೊ ಕಂಡೆ, ಎನಗಿಹುದು ಕರುಣ ಎಂದೆಂದು ಇಹುದು ಇದಕನುಮಾನವಿಲ್ಲ ವನಜಾಕ್ಷಿ" ಎಂದು ಆಶ್ವಾಸನೆ ನೀಡಿದ.

"ತತ್ತ್ವಸುವಾಲಿ"ಯ ಅಂತ್ಯದ ಅಧ್ಯಾಯವೇ ಮಾಯಾವಾದ ಖಂಡನೆ. ಇಲ್ಲಿ ಅದ್ವೈತ ತತ್ತ್ವಗಳನ್ನು ಖಂಡಿಸಿ, ದ್ವೈತ ತತ್ತ್ವಗಳನ್ನೆತ್ತಿಹಿಡಿಯಲಾಗಿದೆ. ದ್ವೈತಮತದ ಮುಖ್ಯಸಿದ್ಧಾಂತಗಳಲ್ಲಿ ಒಂದಾದ ಪಂಚಭೇದತತ್ತ್ವವನ್ನು ಪ್ರತಿಪಾದಿಸಲಾಗಿದೆ. ಇದಕ್ಕೆ ಪೂರಕವಾಗಿ ಬಿಂಬ–ಪ್ರತಿಬಿಂಬ ತತ್ತ್ವವನ್ನೂ ನಿರೂಪಿಸಲಾಗಿದೆ.

ತತ್ತ್ವಸುವಾಲಿಯನ್ನು ತ್ರಿಪದೀಛಂದಸ್ಸಿನಲ್ಲಿ ಬರೆದಿರುವುದು. ಜಗನ್ನಾಥದಾಸರ ಸಾಧನೆಯಾಗಿದೆ. ಅತ್ಯಂತ ಸರಳ ಶೈಲಿಯಲ್ಲಿ ದ್ವೈತ ತತ್ತ್ವಗಳನ್ನು ಪ್ರತಿಪಾದನೆ ಮಾಡಿರುವುದೂ ತತ್ತ್ವಸುವಾಲಿಯ ಒಂದು ಯಶಸ್ಸೇ. ಒಟ್ಟಿನಲ್ಲಿ ಸುಲಭವಾಗಿ ಓದುಗರ ಹೃದಯ ತಲುಪುವ ಈ ಕೃತಿ ದಾಸಸಾಹಿತ್ಯವನ್ನು ಶ್ರೀಮಂತಗೊಳಿಸುವಲ್ಲಿ ಸಹಕಾರಿಯಾಗಿರುವುದರಲ್ಲಿ ಸಂದೇಹವಿಲ್ಲ

ರಥಸಪ್ತಮಿ

# ಲಾಡಖಾನ್

ಸೂರ್ಯನು ಬಾನಿನ ಕಣ್ಣು. ಅವನು ಸರ್ವ ಪ್ರಾಣಿಗಳಿಗೆ ಮಾಡಿದ ಉಪಕಾರ ಅತಿದೊಡ್ಡದು. ಅವನಿಂದಲೇ ಸರ್ವಜೀವಿಗಳು ಜೀವಿಸಿರಲು ಸಾಧ್ಯವಾಗಿದೆ. ಅವನಿಂದಲೆ ನಮ್ಮ ಸುತ್ತಲಿರುವ ಪ್ರಕೃತಿಯಲ್ಲಿ ಬದಲಾವಣೆಯಾಗಲು ಕಾರಣ ವಾಗಿದೆ. ಮನುಷ್ಯನಿಗಂತೂ ಅವನು ಚೈತನ್ಯ ಸ್ವರೂಪವಾಗಿದ್ದಾನೆ. ಅವನಿಂದಲೇ ತೇಜಸ್ಸನ್ನು ಮನುಷ್ಯ ಪಡೆಯುತ್ತಾನೆ. ಅವನಿಂದಲೇ ನಮ್ಮ ಪ್ರಾಚೀನ ಮಂತ್ರದ್ರಷ್ಟಾರರಾದ ಋಷಿಶ್ರೇಷ್ಠರು ಋಗ್ವೇದದಲ್ಲಿ ಹೇಳುತ್ತಾರೆ.

ಅಪಾಂ ನಕ್ಷಾತ ಮವಸೇ
ಸವಿತಾರ ಮುಪಸ್ತು ಷಿ
ತಸ್ಯ ವ್ರತನ್ಯುಶ್ಮಸಿ

ಸ್ವರಕ್ಷಣೆಯ ಸಲುವಾಗಿ, ನೀರನ್ನು ಶೋಷಿಸುವ ಸೂರ್ಯನ ಸ್ತುತಿಯನ್ನು ಹಾಡಿರಿ. ನಾವು ಸೂರ್ಯನಿಗಾಗಿ ಯಜ್ಞ ಮಾಡಲು ಇಚ್ಛಿಸುತ್ತೇವೆ.

ವಿಭಕ್ತಾರಂ ಹವಾಮಹೇ
ವಿಸೋಶ್ಚಿತ್ರಸ್ಯ ರಾಧಸಃ
ಸವಿತಾರಂ ನೃಚಕ್ಷಸಂ

ನಿವಾಸಕ್ಕೆ ಕಾರಣೀಭೂತನೂ, ವಿವಿಧ ಪ್ರಕಾರದ ಕ್ಷಣಗಳ ವಿಭಾಜನ ಕರ್ತೃವೂ ಮತ್ತು ಮಾನವ ನಿಗೆ ಪ್ರಕಾಶವನ್ನು ಪರಿಪಾಲಿಸುವಂತಹವನೂ ಆಗಿರುವ ಸೂರ್ಯನನ್ನು ನಾವು ಆಹ್ವಾನಿಸುತ್ತೇವೆ.

ಈ ಮೇಲಣ ಶ್ಲೋಕಗಳಿಂದ ತಿಳಿಯುವುದೇನೆಂದರೆ ಅತಿಪ್ರಾಚೀನ ಗ್ರಂಥವಾದ ಋಗ್ವೇದ ಕಾಲದಲ್ಲಿಯೂ ಸೂರ್ಯನೇ ನಮ್ಮ ಜೀವನಾಧಾರನೂ, ತೇಜೋವಂತನೂ, ಯಶೋವಂತನೂ ಎಂದು ತಿಳಿದು ಸೂರ್ಯನನ್ನು ಭಕ್ತಿ ಪೂರ್ವಕವಾಗಿ ಸ್ತುತಿಸುತ್ತಿದ್ದರು. ಅವನಿಂದ ಸಿದ್ಧಿಯನ್ನು ಪಡೆಯುತ್ತಿದ್ದರು.

ಇದರಂತೆ ಇತರ ವೇದಗಳ ಕಾಲದಲ್ಲಿಯೂ ಸೂರ್ಯನನ್ನು ನಿಷ್ಠೆಯಿಂದ ಭಜಿಸಿದುದು ಕಂಡು ಬರುತ್ತದೆ. ಅಥರ್ವವೇದದಲ್ಲಿ ಸೂರ್ಯನಿಗೆ– ಸವಿತಾ, ವಿಶ್ವವಸು, ರೂಪಾ ಮುಂತಾದ ಏಳು ಹೆಸರುಗಳಿವೆ. ಅವು ಏಳು ಕಿರಣಗಳನ್ನು ಪ್ರತಿಬಿಂಬಿಸುತ್ತವೆ. ಈ ಕಿರಣಗಳೇ ಸಪ್ತಾಶ್ವಗಳಂತಲೂ ಪ್ರಸಿದ್ಧ. ಇವುಗಳಿಂದ ಅಲಂಕೃತವಾದ ರಥದಲ್ಲಿ ಅವನು ಪ್ರಕಾಶಮಾನವಾಗಿ ಬೆಳಗುತ್ತ ವಿಶ್ವವನ್ನೆ ನೋಡುತ್ತಾನೆ. ಇವನು ಸಜೀವ, ನಿರ್ಜೀವ ವಸ್ತುಗಳಿಗೂ ಆತ್ಮವಾಗಿದ್ದಾನೆ. ಜನರ ಕಾಮಾಲೆ ಕುಷ್ಠ, ಹೃದ್ರೋಗಗಳನ್ನು ನಾಶ ಪಡಿಸಬಲ್ಲ, ದುಃಸ್ವಪ್ನವನ್ನೂ ದೂರ ಮಾಡಬಲ್ಲ.

ಉಪನಿಷತ್ತಿನಲ್ಲಿ ಕೂಡ ಸೂರ್ಯನನ್ನು 'ಅಸತೋಮಾ ಸದ್ಗಮಯ, ತಮಸೋಮಾ ಜ್ಯೋತಿರ್ಗಮಯ, ಮೃತ್ಯೋರ್ಮಾ ಅಮೃತಂಗಮಯ ಎಂದು ಪ್ರಾರ್ಥನೆ ಮಾಡಿರುವುದನ್ನು ನಾವು ಕಾಣುತ್ತವೆ. ಹೀಗೆ ಪ್ರಭಾವಿತವಾದ ಪುರು ವಂಶವೇ ಸೂರ್ಯವಂಶವಾಗಿ ಬೆಳಗಿದುದು ಜನ ಜನಿತವಾಗಿದೆ. ವಂಶದಲ್ಲಿ ಆಗಿಹೋದ ಪುರಾಣ ಪ್ರಸಿದ್ಧರಾದ ಪುರೂರವ, ಮಾಂಧಾತ, ಸಗರ, ಭಗೀರಥ, ದುಷ್ಯಂತ, ಭರತ, ದಶರಥ, ರಾಮ ಚಂದ್ರಾದಿ ಪ್ರಭೃತಿಗಳು ಸೂರ್ಯನ ಉಪಾಸಕರೇ ಆಗಿದ್ದರು.

ಸೂರ್ಯನನ್ನು ಉಪಾಸನೆ ಮಾಡುವವರು ಅವನಿಗೆ ಅಗ್ನಿ ಕಾರ್ಯದಲ್ಲಿ ಹವಿಸ್ಸನ್ನು ಕೊಡುತ್ತಾರೆ. ಅವನು ತನ್ನ ಕಿರಣಗಳಿಂದ ಆ ಹವಿರ್ಭಾಗವನ್ನು ತೆಗೆದು ಕೊಳ್ಳುವುದಲ್ಲದೆ ಇಂಥ ಪುಣ್ಯಶೀಲ ಆತ್ಮಗಳಿಗೆ ತನ್ನ ಬಿಂಬದಲ್ಲಿ ವಾಸವಾಗಿರಲು ಅಜ್ಞೆ ಮಾಡುವನಂತೆ.

ಸೂರ್ಯನ ನಿಯಮನ ಶಕ್ತಿ ಎಂಥದೆಂಬುದನ್ನು ತಿಳಿಯಲು ಪುರಾಣ ಪ್ರಸಿದ್ಧವಾದ ಸತ್ಯವಾನನ ಪ್ರಾಣವನ್ನು ಯಮನು ಹರಣಮಾಡಿದನು. ಸೂರ್ಯನ ಸೃಜನ ಶಕ್ತಿಯ ಸ್ವರೂಪಳಾದ ಸಾವಿತ್ರಿಯು ಅಶ್ವಪತಿ ರಾಜನ ಮಗಳಾಗಿ ಜನಿಸಿದ್ದರಿಂದ ಪತಿಯನ್ನು ಯಮಪಾಶದಿಂದ ಬಿಡಿಸಲು ಶಕ್ತಳಾದಳು.

ಇಂಥ ಸೂರ್ಯನ ಉಪಾಸನೆ ಮಾಡದ ಭಾರತೀಯನು ಯಾರೂ ಇರಲಾರ. ಪ್ರತಿಮನೆಯಲ್ಲಿಯೂ ಬೆಳಗ್ಗೆ ಸ್ನಾನ ಮಾಡಿದಾಕ್ಷಣ ಸೂರ್ಯನನ್ನು ಪ್ರತಿಯೊಬ್ಬರೂ ಪ್ರಾರ್ಥಿಸುತ್ತಾರೆ. ವಾರದಲ್ಲಿ ಬಂದು ದಿನ ರವಿವಾರವೆಂದೇ ಕರೆದಿದ್ದಾರೆ.

ಸೂರ್ಯೋಪಾಸನೆಯಿಂದ ಧರ್ಮರಾಜನು ಅಕ್ಷಯ ಪಾತ್ರೆಯನ್ನೂ, ಸತ್ರಾಜಿತನು ಶ್ಯಮಂತಕ ಮಣಿಯನ್ನೂ ಪಡೆದರು. ಕುಂತಿಗೆ ಜಗತ್ಪ್ರಸಿದ್ಧನಾದ ಕರ್ಣನು ಜನಿಸಿದ. ಇವೆಲ್ಲ ಪುರಾಣ ಕಥೆಗಳಾದರೆ, ನಮ್ಮ ಭಾರತದ ಇತಿಹಾಸವನ್ನು ಅವಲೋಕಿಸಿದಾಗ ಭಿನ್ನಮತೀಯನಾದ ಅಕ್ಬರ ಮಹಾಶಯನು ಬೆಳಗ್ಗೆ ಎದ್ದು ಸ್ನಾನಮಾಡಿ ಸೂರ್ಯನನ್ನು ಪ್ರಾರ್ಥಿಸುತ್ತಿದ್ದನಂತೆ, ಶಿವಾಜಿಯ ತಾಯಿ ಸೂರ್ಯೋಪಾಸಕಳಾಗಿದ್ದಳು. ಬಾಲ ಗಂಗಾಧರ ತಿಲಕರ ತಾಯಿಯು ಸೂರ್ಯನನ್ನು ಉಪಾಸಿಸುತ್ತಿದ್ದಳು. ಪಡೆದಳು, ಮಹಾತ್ಮಾ ಗಾಂಧೀಜಿಯವರ ತಾಯಿ ಕೂಡ ಚಾತುರ್ಮಾಸದಲ್ಲಿ ಸೂರ್ಯನನ್ನು ಕುರಿತು ವ್ರತಗಳನ್ನು ಮಾಡುತ್ತಿದ್ದಳೆಂದು ಅವರ ಆತ್ಮ ಚರಿತ್ರೆಯಿಂದ ತಿಳಿದುಬರುತ್ತದೆ.

ಒಂದನೇಶತಮಾನದಿಂದ ಮುಸಲ್ಮಾನರ ಆಗಮನದವರೆಗೆ ಅಂದರೆ 10 ನೇ ಶತಮಾನದವರೆಗೆ ನಮ್ಮ ದೇಶದಲ್ಲಿ ಅನೇಕ ಜನ ರಾಜರೂ ಕೂಡ ಸೂರ್ಯೋಪಾಸಕರಾಗಿದ್ದರೂ ಸೂರ್ಯ ದೇವಾಲಯಗಳನ್ನು ಕಟ್ಟಲಿಲ್ಲ. ಭಾರತದಲ್ಲಿ ಸೂರ್ಯ ದೇವಾಲಯಗಳು ಬೆಟ್ಟನ ಮೇಲೆ ಎಣಿಸುವಷ್ಟು ಮಾತ್ರವಿದೆ. ಒರಿಸ್ಸಾದಲ್ಲಿ ಕೋನಾರ್ಕ ದೇವಾಲಯ ಸುಪ್ರಸಿದ್ಧ. ಅದರಂತೆ ಕರ್ನಾಟಕದಲ್ಲಿ ಐಹೊಳೆಯಲ್ಲಿ ಕೂಡ ಆಕಾಲಕ್ಕೆ ಪ್ರಸಿದ್ಧಿ ಪಡೆದ ಒಂದು ದೇವಾಲಯವಿದ್ದುದು ಕಂಡುಬರುತ್ತದೆ.

ಉತ್ತರ ಭಾರತದಲ್ಲಿ ಬಿಡಿಕಲ್ಲಿನ ಕಟ್ಟಡಗಳನ್ನು ದೇವಾಲಯಗಳಿಗಾಗಿ ನಿರ್ಮಿಸುವ ಪ್ರಯೋಗವನ್ನು ಗುಪ್ತರ ಅರಸರು ಮೊದಲು ಮಾಡಿದರು. ಸುಮಾರು ಅದೇ ಕಾಲಕ್ಕೆ ದಕ್ಷಿಣಭಾರತದಲ್ಲಿಯ ಕರ್ನಾಟಕದಲ್ಲಿ ಚಾಲುಕ್ಯರು ಇಂಥ ಕಟ್ಟಡಗಳನ್ನು ಕಟ್ಟುವ ಪ್ರಯೋಗಗಳನ್ನು ಮಾಡಹತ್ತಿದರು. ಚಾಲುಕ್ಯರ ಈ ಎರಡೂ ಆಯೋಜನೆ ಮತ್ತು ಪ್ರಯೋಗಗಳು ಧಾರ್ಮಿಕ ಭಾವನೆಗಳಿಂದಲೇ ಸ್ಫೂರ್ತಿಯನ್ನು ಪಡೆದಿದ್ದವು.

ಸಾಂಚಿಯಲ್ಲಿ ಇನ್ನೂ ನಿಂತಿರುವ ಕ್ರಿ. ಶ. ನಾಲ್ಕನೇ ಶತಮಾನದ ಗುಪ್ತರ ಒಂದು ಚಿಕ್ಕ ಕಟ್ಟಡವು ಉತ್ತರ ಭಾರತದಲ್ಲಿ ಅತ್ಯಂತ ಪುರಾತನವಾದರೆ, ದಕ್ಷಿಣ ಭಾರತದಲ್ಲಿ ಸುಮಾರು ಅದೇ ಕಾಲಕ್ಕೆ ಐಹೊಳೆಯಲ್ಲಿ ಕಟ್ಟಲಾದ, ಗೌಡರ ಗುಡಿ (ಲಕ್ಷ್ಮೀದೇವಾಲಯ)ಸೂರ್ಯದೇವಾಲಯ (ಲಾಡಖಾನ ದೇವಾಲಯ), ಕುಂತಿಗುಡಿ, ದುರ್ಗಾದೇವಾಲಯ ಪ್ರಸಿದ್ಧ ದೇವಾಲಯಗಳು. ಅಲ್ಲದೆ ಇನ್ನೂ ನೂರಾರು ಗುಡಿಗಳನ್ನು ಅಲ್ಲಿ ಕಾಣಬಹುದು. ಇಂಥ ಐಹೊಳೆ ಆಕಾಲಕ್ಕೆ ಚಾಲುಕ್ಯರ ಆದ್ಯ ರಾಜಧಾನಿಯಾಗಿತ್ತು. ಇದಕ್ಕೆ ಆರ್ಯಪುರವೆಂದು ಹೆಸರಿದ್ದಿತು. ಇಲ್ಲಿ ವೇದ ವೇದಾಂತ ಪಾರಂಗತರಾದ ನೂರಾರು ಪಂಡಿತರು ಆಶ್ರಯ ಪಡೆದಿದ್ದರು. ಇದು ಮಹಾ ವಿದ್ಯಾಪೀಠವೂ ಆಗಿತ್ತು. ಇದರ ಜೊತೆಗೆ ಭಾರತೀಯ ವಾಸ್ತು ಶಿಲ್ಪಕ್ಕೂ ಪ್ರಸಿದ್ಧಿ ಪಡೆದಿತ್ತು.

ಚಾಲುಕ್ಯರು ಪ್ರಪ್ರಥಮ ನಿರ್ಮಿಸಿದ ದೇವಾಲಯವೆಂದರೆ ಗೌಡರ ಗುಡಿ ಎಂದು ಹೇಳಲ್ಪಡುವ

ಶ್ರೀ ಹನುಮಂತಾಚಾರ್ಯ ಕಟ್ಟಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

"ಲಕ್ಷ್ಮೀದೇವಿಗುಡಿ". ಇದು ಗ್ರಾಮಗಳಲ್ಲಿ ಕಟ್ಟುವ ಸಭಾಗೃಹದಂತೆ ಭಾರಿ ಕಲ್ಲುಗಂಬಗಳ ಮಂಟಪ ಪಡೆದಿದೆ. ಈ ದೇವಾಲಯದ ಮೇಲ್ಛಾವಣಿ ಮಧ್ಯದಲ್ಲಿ ಸಮತಟ್ಟು ಆಗಿದ್ದು ಸುತ್ತಲೂ ಇಳಿಜಾರಾಗಿದೆ. ಮಧ್ಯದ ಅಂಕಣವನ್ನು ಗರ್ಭ ಗೃಹವಾಗಿಟ್ಟುಕೊಂಡು ಸುತ್ತಲೂ ತೆರೆದ ಪ್ರದಕ್ಷಿಣ ಪಥವನ್ನು ನಿರ್ಮಿಸಿದ್ದಾರೆ. ಆದರೆ ಭಕ್ತಾದಿಗಳು ಸೇರಿದಾಗ ಮಳೆ, ಗಾಳಿ, ಬಿಸಿಲುಗಳಿಂದ ರಕ್ಷಣೆ ಇಲ್ಲದುದರಿಂದ ಸ್ಥಪತಿಗಳು ಬೇರೊಂದು ಯೋಜನೆಯನ್ನು ಮಾಡಿ (ಲಾಡಖಾನ) ಎಂದು ಹೇಳುವ ಸೂರ್ಯಮಂದಿರವನ್ನು ಕಟ್ಟಿದರು. ಆದರ ಮಂಟಪಕ್ಕೆ ಸುತ್ತಲೂ ಜಾಲಂದ್ರಗಳ ಕಲ್ಲಿನ ಗೋಡೆಯನ್ನು ಕಟ್ಟಿ ಮಳೆಗಾಳಿಯಿಂದ ಸಭಾ ಮಂಟಪವನ್ನು ರಕ್ಷಿಸಿದರು. ಇಷ್ಟಲ್ಲದೆ ತಳದ ವಿನ್ಯಾಸವನ್ನು ಬೆಳೆಯಿಸಿ ಮುಖಮಂಟಪವನ್ನು ಸೇರಿಸಿದರು. ಭಗವದಾಲಯವು ಹೆಚ್ಚು ಎತ್ತರವಾಗಿರಬೇಕೆಂದು ಮೇಲ್ಛಾವಣಿಯ ಮೇಲೆ ಪುಟ್ಟದಾದ ಗರ್ಭಗೃಹವನ್ನು ಕಟ್ಟಿದರು. ಅದಕ್ಕೆ ಏರಲು ಕಲ್ಲಿನ ಮೆಟ್ಟಿಲನ್ನು ಕೂಡ ಮಾಡಿರುವುದು ಕಾಣಬಹುದು.

ಉಳಿದ ಗುಡಿಗಳ ಗರ್ಭಗುಡಿಗಳಲ್ಲಿ ಮೂರ್ತಿಗಳಿಲ್ಲ. ಆದರೆ ಈ ಸೂರ್ಯನಾರಾಯಣನ ಗುಡಿಯಲ್ಲಿ ಸುಮಾರು ನಾಲ್ಕು ಅಡಿಗಳಷ್ಟು ಎತ್ತರದ ಸೂರ್ಯನ ಮೂರ್ತಿ ಕಂಗೊಳಿಸುತ್ತದೆ.

ಎತ್ತರದ ಜಗಲಿಯ ಮೇಲೆ ಇರುವ ಈ ಮೂರ್ತಿ ಅತ್ಯಂತ ಗಂಭೀರವಾದ ಮುಖಮುದ್ರೆ ಹೊಂದಿ, ಸೂರ್ಯದೇವನ ಎಲ್ಲ ಲಾಂಛನಗಳನ್ನು ಪಡೆದಿದೆ. ಈ ಮೂರ್ತಿಯು ಒಂದು ವಿಶಿಷ್ಟವಾದ ಕಲ್ಲಿನಿಂದ ನಿರ್ಮಿಸಲ್ಪಟ್ಟಿದೆ. ಅತಿ ಬಿರುಸಾದ ಕಲ್ಲು ಆದಾಗಿದ್ದು ಕೃಷ್ಣವರ್ಣದಿಂದ ಕಂಗೊಳಿಸುತ್ತದೆ ಮತ್ತು ನುಣುಪಾಗಿದ್ದು ಹೊಳಪುಳ್ಳದ್ದಾಗಿದೆ. ಉಳಿದಲ್ಲಿ ಗರ್ಭಗುಡಿಗಳಲ್ಲಿ ಮೂರ್ತಿಗಳಿಲ್ಲದಿದ್ದರೂ ಈ ಗರ್ಭಗುಡಿಯಲ್ಲಿ ಮಾತ್ರ ಮೂರ್ತಿ ಅಚ್ಚಳಿಯದೆ, ಭಿನ್ನವಾಗದೇ, ಉಳಿದಿರುವದು ಸೋಜಿಗವಾಗಿದೆ. ಅಲ್ಲಿಯ ಜನ ಈ ಎಲ್ಲ ಗುಡಿಗಳನ್ನು ತಮ್ಮ ವಾಸಕ್ಕಾಗಿ ಉಪಯೋಗಿಸುತ್ತಿದ್ದರು. ಆರ್ಕಿಯಾಲಾಜಿಕಲ್ ಡಿಪಾರ್ಟ್‌ಮೆಂಟ್ ಆಫ್ ಕರ್ನಾಟಕದವರು ಈ ಎಲ್ಲ ಗುಡಿಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಅವೆಲ್ಲವನ್ನು ಶುಚಿಗೊಳಿಸಿದ್ದಾರೆ. ಮತ್ತು ಪ್ರವಾಸಿಗರ ಚಿತ್ತಾಕರ್ಷಕವಾಗುವಂತೆ ಮಾಡಿದ್ದಾರೆ. ಆದರೆ ಸೂರ್ಯನಾರಾಯಣಗುಡಿಯಲ್ಲಿ ಮೂರ್ತಿ ಇದ್ದರೂ ಪೂಜೆ ಪುನಸ್ಕಾರಗಳಿಲ್ಲ. ಸೂರ್ಯನಾರಾಯಣ ಗುಡಿ ಎಂದು ತಿಳಿದಿದ್ದರೂ ಈ ಮೊದಲು ಒಬ್ಬ ಸಾಧು ಇದ್ದನೆಂದು ಅವನ ಹೆಸರು (ಲಾಡಖಾನ) ಅಳಿಸಿಲ್ಲ.

(ಮುಂದಿನಪುಟ ನೋಡಿ)

ಭಾರತ ಅನೇಕ ದೇವಸ್ಥಾನಗಳಿಂದ ಕೂಡಿದ ಒಂದು ಪವಿತ್ರ ದೇಶ. ಆದರೆ "ಸೂರ್ಯ" ದೇವತೆಯ ದೇವಸ್ಥಾನ ಇಲ್ಲಿ ಬಹಳ ಅಪರೂಪ. ಸೂರ್ಯ ದೇವಾಲಯ ಎಂದ ಕೂಡಲೇ ನೆನಪಿಗೆ ಬರುವುದು 'ಕೋನಾರ್ಕ' ದೇವಾಲಯ. ಆದರೆ ಆಂಧ್ರ ಪ್ರದೇಶದ ಶ್ರೀಕಾಕುಲಂ ಜಿಲ್ಲೆಯ ನಾಗಾವಳಿಯ ದಂಡೆಯ ಮೇಲೆ ಇರುವ "ಅರಸವಿಲ್ಲೈ" ಎಂಬ ಸ್ಥಳ ಅಂತಹುದೇ ಸೂರ್ಯ ದೇವಾಲಯ ಇರುವ ಐತಿಹಾಸಿಕತೆ ಮತ್ತು ಶಿಲ್ಪಕಲೆಗಳಿಂದ ಕೂಡಿದುದಾಗಿದೆ.

"ಅರಸವಿಲ್ಲೈ" ಎಂಬುದನ್ನು ಆಂಧ್ರದ ಇತಿಹಾಸದ ಪುಟಗಳಲ್ಲಿ ಕಾಣಬಹುದಾಗಿದೆ. ಇದರ ಮೂಲಪದ "ಹರ್ಷವಿಲ್ಲೈ"ಇತ್ತೆಂದು ಪ್ರಾಚೀನ ಗ್ರಂಥಗಳಿಂದ ತಿಳಿದು ಬರುತ್ತದೆ. ಈ ದೇವಾಲಯವನ್ನು 7 ನೇ ಶತಮಾನದಲ್ಲಿ ಗುಣಾರ್ಣವನ ಮಗನಾದ ದೇವೇಂದ್ರ ವರ್ಮನು ಕಟ್ಟಿಸಿದನೆಂದು ಐತಿಹ್ಯವಿದೆ. ಅನೇಕ ಶಿಲಾಶಾಸನಗಳು ಈ ದೇವಾಲಯವನ್ನು ಬೆಳೆಸಿದ ರಾಜರುಗಳ ಹೆಸರನ್ನು ಹೊತ್ತು ನಿಂತಿದೆ. ಕಳಿಂಗ ವಂಶದವರು, ಅನಂತದೇವವರ್ಮ, ಜೋಡಗಂಡದೇವ ಇವರೆಲ್ಲಾ ದೇವಸ್ಥಾನದ ಅಭಿವೃದ್ಧಿಗಾಗಿ ಮತ್ತು ಅದರ ಕೃಪಾಶ್ರಯದಲ್ಲಿ ನಡೆಯುವ ವಿದ್ಯಾ ಸಂಸ್ಥೆಗಳಿಗೆ ನೆರವಾಗಿದ್ದಾರೆ.

ಈ "ಅರಸವಿಲ್ಲೈ" ದೇವಾಲಯವು ವಿಜಯನಗರದ ಕೃಷ್ಣದೇವರಾಯನ ಕಾಲದವರೆಗೂ ಬಹಳ ಚೆನ್ನಾಗಿತ್ತೆಂದೂ ತಿಳಿದು ಬಂದಿದೆ. ಆಗಿನ ಕಾಲದಲ್ಲಿ ಹಿಂದೂಗಳಿಗೆ ಪ್ರಮುಖ ದೇವಾಲಯವಾಗಿ ಬಹಳ ವಿಜೃಂಭಣೆಯಿಂದ ಇದ್ದ ಇದು ಬಹು ಬೇಗ ದುರಾಚಾರಿಗಳಾದ ವಿಗ್ರಹ ಭಂಜಕರ ಕೈಗೆ ಸಿಲುಕಿ ನಾಶವಾಯಿತು. ಅನೇಕ ಶಿಲ್ಪಕಲಾ ಕೆತ್ತನೆಗಳು ನಾಶವಾಯಿತಾದರೂ ಮೂಲ ವಿಗ್ರಹ ಮಾತ್ರ ದುರಾಚಾರಿಗಳಿಂದ ಪಾರಾಗಿತ್ತು. ಈ ದೇವಾಲಯದ ಜೀರ್ಣೋದ್ಧಾರ ಕಾರ್ಯ ಮಾತ್ರ ನಡೆಯಲೇ ಇಲ್ಲ. ಹದಿನೇಳನೇ ಶತಮಾನದಲ್ಲಿ ಭಕ್ತನೊಬ್ಬನ ಸ್ವಪ್ರೇರಣೆಯಿಂದ ಇದರ ಜೀರ್ಣೋದ್ಧಾರವಾಯಿತು. 18 ನೇ ಶತಮಾನದ ಹೊತ್ತಿಗೆ ಇದು ಎಂದಿನ ಶಿಲ್ಪಕಲಾ ಕೆತ್ತನೆಗಳಿಂದ ತುಂಬಿಕೊಂಡು ಅನೇಕ ಭಕ್ತಾದಿಗಳನ್ನು ಯಾತ್ರಿಕರನ್ನು ತನ್ನೆಡೆಗೆ ಆಕರ್ಷಿಸುವುದರಲ್ಲಿ ಯಶಸ್ವಿಯಾಗುತ್ತಿದೆ. "ಕೋನಾರ್ಕ"ನ್ನು ಬಿಟ್ಟರೆ ಆಂಧ್ರ ಪ್ರದೇಶದ ಈ "ಅರಸವಿಲ್ಲೈ" ಸೂರ್ಯದೇವಾಲಯವೇ ದ್ವಿತೀಯ ದೇವಾಲಯವಾಗಿದೆ.

ಅರಸವಿಲ್ಲೈ ಮತ್ತು ಶ್ರೀ ಕೂರ್ಮ ಜ್ಯೋತಿಕೇಂದ್ರಗಳು. ಈ ಎರಡೂ ಸ್ಥಳಗಳು ಪರಸ್ಪರ 15 ಕಿ. ಮಿ. ದೂರದಲ್ಲಿವೆ. ಆದರೆ ಶ್ರೀಕೂರ್ಮ ಸಮುದ್ರದಂಡೆಯಲ್ಲಿದೆ. ಇಲ್ಲಿ ಮಹಾವಿಷ್ಣುವಿನ "ಕೂರ್ಮಾವತಾರ"ದ ವಿಗ್ರಹವಿದೆ. ಭಕ್ತರು ಇವೆರಡು ಸ್ಥಳಗಳಿಗೆ ಭೇಟಿ ನೀಡುತ್ತಾರೆ. ಪ್ರಥಮತಃ ಭಕ್ತರು ಶ್ರೀ ಕೂರ್ಮದಲ್ಲಿ ಸಮುದ್ರಸ್ನಾನ ಮಾಡಿ ನಂತರ ಅರಸವಿಲ್ಲೈನ ಸೂರ್ಯದೇವಾಲಯಕ್ಕೆ ಬಂದು ಅಲ್ಲಿಯ ಪುಷ್ಕರಣಿಯಲ್ಲಿ ಸ್ನಾನ ಮಾಡುತ್ತಾರೆ. ನಂತರ ದೇವರ ದರ್ಶನ.




ಅರಸವಿಲ್ಲೈನ ಸೂರ್ಯವಿಗ್ರಹ ಬಹಳ ಮುದ್ದಾಗಿದ್ದು ಶಾಂತತೆಯಿಂದ ಕೂಡಿದ್ದು ನೋಡುವವರನ್ನು ಭಾವುಕರನ್ನಾಗಿ ಮಾಡುತ್ತದೆ. ಈ ವಿಗ್ರಹ 5 ಅಡಿ ಎತ್ತರ 3 ಅಡಿ ಅಗಲ ಇದ್ದು ಒಂದು ಕೈಯಲ್ಲಿ ಪದ್ಮ ಹಿಡಿದಿದ್ದು ಮತ್ತೊಂದು ಅಭಯಹಸ್ತವನ್ನು ತೋರಿಸುತ್ತಿದೆ.

ವಿಗ್ರಹದ ಎಡ ಬಲಗಳಲ್ಲಿ 'ಉಷ' ಮತ್ತು 'ಛಾಯಾ' ಎಂಬ ಸೂರ್ಯ ಪತ್ನಿಯರ ವಿಗ್ರಹಗಳೂ ಮತ್ತು ದೇವರನ್ನು ಆರಾಧಿಸುತ್ತಿರುವ ಮಹರ್ಷಿ ಸನಕ ಮತ್ತು ಸನಂದನರ ಪ್ರತಿಮೆಗಳು ಬಹಳ ನವುರಾಗಿ, ಸುಂದರವಾಗಿ ಕೆತ್ತಲ್ಪಟ್ಟಿದೆ.

ವಿಗ್ರಹದ ಕೈಯಲ್ಲಿರುವ "ಪದ್ಮ" ಜ್ಞಾನದ ಮತ್ತು 'ಉಷೆ' ಮತ್ತು 'ಛಾಯಾ' ದೇವಿಯರು ಕಾಲದ ಅನಂತತೆಯ ಕುರುಹಾಗಿಯೂ ಸೂರ್ಯನ ರಥದ ಏಳು ಕುದುರೆಗಳು ಬೆಳಕಿನ ಏಳು ಬಣ್ಣಗಳ ಸಂಕೇತವಾಗಿಯೂ ಇವೆ.

ಇಲ್ಲಿ ಚೈತ್ರಶುದ್ಧ ಏಕಾದಶಿಯಂದು ದೇವರಿಗೆ ಕಲ್ಯಾಣೋತ್ಸವವನ್ನು ಮಾಘ ಶುದ್ಧ ಸಪ್ತಮಿಯಂದು (ರಥಸಪ್ತಮಿ) ಸೂರ್ಯನ ಜಯಂತಿಯನ್ನು ಆಚರಿಸಲಾಗುತ್ತದೆ. ಕೆಲವು ನಿರ್ದಿಷ್ಟ ದಿನಗಳಂದು ನೀಲಾಕಾಶದ ಸೂರ್ಯನ ಕಿರಣವು ದೇವಸ್ಥಾನವನ್ನು ಹೊಕ್ಕು ವಿಗ್ರಹದ ಪಾದಗಳಲ್ಲಿ ಬಿಂಬಿಸುತ್ತದೆ ಎಂಬ ವಿಷಯ ಮತ್ತು ಅದ್ಭುತ ಸಂಗತಿ ಸಾವಿರಾರು ಜನ ಭಕ್ತಾದಿಗಳನ್ನು ತನ್ನತ್ತ ಸೆಳೆಯುವಲ್ಲಿ ಯಶಸ್ವಿಯಾಗಿದೆ.

ಅಲ್ಲದೆ ಶ್ರೀ ಕೂರ್ಮದಲ್ಲಿ ಸ್ನಾನ ಮಾಡಿ ಇಲ್ಲಿಂದ ಅರಸವಿಲ್ಲೈಗೆ ಹೋಗಿ ದೇವರ ದರ್ಶನ ಮಾಡುವ ಪದ್ಧತಿಯನ್ನು ಬಹುಕಾಲದಿಂದಲೂ ಜನ ಆಚರಿಸುತ್ತ ಬರುತ್ತಾರೆ.



**ಶ್ರೀ ನಂ. ರವಿಶಂಕರ್**

(ಹಿಂದಿನ ಪುಟದಿಂದ)

ಆ ಮೂರ್ತಿಯ ಶಿರದಿಂದ ಪಾದದವರೆಗೆ ಬೇರೆ ಬೇರೆ ಕಡೆಗಳಲ್ಲಿ ಬಡಿದಾಗ ಸಪ್ತಸ್ವರಗಳು ಹೊರಡುತ್ತವೆ. ಆದ್ದರಿಂದ ಗೈಡುಗಳು ಪ್ರವಾಸಿಗರಿಗೆ ಮೂರ್ತಿಯ ಪರಿಚಯ ಮಾಡುವಾಗ ಬೊಟ್ಟಿನಿಂದ ಬಡಿದು ತೋರಿಸುತ್ತಾರೆ. ಆರ್ಕಿಯಾಲಾಜಿಕಲ್‌ಡಿಪಾರ್ಟ್‌ಮೆಂಟ್ ಆದೇಶ ಗೈಯುವುದಕ್ಕಿಂತ ಮೊದಲು ಪ್ರವಾಸಿಗರು ವಿನೋದಕ್ಕಾಗಿ ಮೂರ್ತಿಗೆ ಕಲ್ಲಿನಿಂದ ಮೃದುವಾಗಿ ಕುಟ್ಟುತ್ತಿದ್ದರಂತೆ. (ಹಂಪೆಯ ಶ್ರೀ ವಿಜಯವಿಠಲ ಗುಡಿಯ ಸಪ್ತಸ್ವರ ಕಂಬಗಳು ಹೀಗೆ ಕಲ್ಲೇಟಿಗೆಸಿಕ್ಕಿ ಪಡೆದು ಸ್ವರ ಸಣ್ಣದು ಮಾಡಿಕೊಂಡಿವೆ.) ಆದರೂ ಈ ಸೂರ್ಯನ ಮೂರ್ತಿಯು ವಜ್ರಕಾಯಿಯಾಗಿ ಸವೆಯದೆ ನಿಂತಿದೆ. ಬಡಿದ ಸ್ಥಳಗಳು ಮಾತ್ರ ಸ್ವಲ್ಪ ಬೆಳ್ಳಗಾಗಿವೆ.

# ಹರಿದಾಸರು ಕಂಡ ಶ್ರೀತುಳಸಿ

ದೇವ ದಾನವರು ಜಲಧಿಯನ್ನು ಮಥಿಸು ವಾಗ ಉದಯಿಸಿದ ಅಪೂರ್ವ ವಸ್ತುಗಳಲ್ಲಿ ಶ್ರೀ ತುಳಸಿಯೂ ಒಂದು. ಶ್ರೀಹರಿಯು ಅಮೃತ ಪೂರಿತವಾದ ಕಲಶವನ್ನು ಕೈಯಲ್ಲಿ ಹಿಡಿದುಕೊಂಡು ಬರುವ ಸಮಯದಲ್ಲಿ, ಅಕ್ಷಿಗಳಿಂದ ಉದುರಿದ ಆನಂದಭಾಷ್ಪಗಳು, ಕಲಶದಲ್ಲಿ ಸೇರಿ, ನೆಲಕ್ಕೆ ಬಿಂದುಗಳು ಉದುರಿ ತುಳಸಿಯ ರೂಪದಲ್ಲಿ ಜನಿಸಿದ ವೆಂದು ಶ್ರೀ ವಾದಿರಾಜ ಗುರುಸಾರ್ವ ಭೌಮರು ತಮ್ಮ "ಶ್ರೀ ತುಳಸಿಯನು ಸೇವಿಸಿ" ಎಂಬ ಕೃತಿಯಲ್ಲಿ

ಅಮೃತವ ಕೊಡುವ ಹರುಷದೊಳಿರ್ದ
ಕಮಲೆಯರಸನಕ್ಷಿಗಳಿಂದ
ಪ್ರಮೋದಾಶ್ರು ಸುರಿಯೆ
ಕ್ಷೀರಾಬ್ಧಿಯೊಳು,
ಶ್ರೀ ಮಹಾತುಳಸಿಯು ಅಂದುದಿಸಿದಳು

ಎಂದು ವರ್ಣಿಸಿದ್ದಾರೆ. ಶ್ರೀಹರಿಯನ್ನು ಒಲಿಸಿಕೊಳ್ಳಲು ಶ್ರೀ ತುಳಸಿಯ ಸೇವೆಯು ಅತೀ ಸುಲಭೋಪಾಯವೆಂದು, ಹರಿದಾಸ ರೆಲ್ಲ ಹಾಡಿ-ಕೊಂಡಾಡಿದ್ದಾರೆ. ಇಂತಹ ತುಳಸಿಯ ಪ್ರಾಮುಖ್ಯತೆಯನ್ನು ವರ್ಣಿಸುತ್ತಾ... ದಾಸಶ್ರೇಷ್ಠ ಪುರಂದರ ದಾಸರು ;-

ಒಲ್ಲನೋ ಹರಿ ಕೊಳ್ಳನೋ,
ಸಕಲ ಸಾಧನವಿದ್ದು ತುಳಸಿ ಇಲ್ಲದ
ಪೂಜೆ...

ಎಂದಿದ್ದಾರೆ. ಇದನ್ನೇ ವರ್ಣಿಸುತ್ತಾ, ವಾದಿರಾಜ ಗುರುಸಾರ್ವಭೌಮರು, ತಮ್ಮ ಕೃತಿಯಾದ "ಯಾತಕಯ್ಯಾ ತೀರ್ಥಕ್ಷೇತ್ರ ಗಳು ಶ್ರೀ ತುಳಸಿಯನ್ನು ಸೇವಿಪ ಸುಜನರಿಗೆ" ಎಂಬ ಕೃತಿಯಲ್ಲಿ,

ಶ್ರೀಹರಿಪಾದಕೆ ಶ್ರೀ ತುಳಸಿಯೇರಿಸಿದ
ನರನನು ಪರಮಪದಕೇರಿಸುವದು
ನಿರುತದಿ ತುಳಸಿಯ ಕಂಡ ನರಗೆ,
ನರಕಗಳ ದರುಶನ ಮತ್ತಿಲ್ಲ

ಎಂದಿದ್ದಾರೆ.

ಗೋಪಾಲದಾಸರು ಶ್ರೀ ತುಳಸಿಯ ಮಹಿಮೆಯನ್ನು ತೋರಿಸುವ, ಶ್ರೀಹರಿ ಮತ್ತು ತುಳಸಿಯ ಸಂವಾದದ ತಮ್ಮ ಕೃತಿಯಾದ "ಶ್ರೀ ತುಳಸಿಯನು ಸೇವಿಸಿ" ಯಲ್ಲಿ

ಎನ್ನ ಪೂಜೆಯನು ಏನೇನು ಬಗೆ
ದ್ರವ್ಯದಲಿ-
ಮನ್ನಿಸುತ ಮಾಡಿದರು
ಫಲವೀಯೆನವರಿಂಗೆ,
ನಿನ್ನ ಸಹಿತದಿ ಸರ್ವ ಬಗೆಯಲ್ಲಿ
ಪೂಜಿಸಲು
ಮುನ್ನ ಕೈಗೊಂಬೆ ನಾನು

ಎಂದು ಹರಿ ಹೇಳುವನೆನ್ನುತ್ತ

"ಒಂದು ದಳವಾದರೆಯು ಭಕುತಿಯಲಿ ಹರಿಚರಣದ್ವಂದಗಳಿಗೆ ಅರ್ಪಿಸಿದ ನರರಿ ಗೆಣೆಯಿಲ್ಲ, ಭವಬಂಧ ಲಂಘಿಸಿ, ದೇವ ವೃಂದದೊಳು ಸೇರಿ ಸುಖಹೊಂದಿ ನಲಿ ದಾಡುತಿಹರು" ಎಂದಿದ್ದಾರೆ.

ಪ್ರಸನ್ನ ವೆಂಕಟ ದಾಸರು "ತುಳಸಿಯ ಮಹಿಮೆ" ಎಂಬ ಕೃತಿಯಲ್ಲಿ ಮಹಿಮಾತಿಶಯವನ್ನು ವರ್ಣಿಸುತ್ತಾ,

ತುಳಸಿಯಾ ನೆಳಲಲ್ಲಿ ಅಂಕುರಗಳೆದ್ದಲ್ಲಿ
ಕಳೆದ ಪಿತೃಗಳಿಗೆ ಅನ್ನವಿತ್ತ
ಅಕ್ಷಯಫಲವು ಊರ್ಧ್ವಪುಂಡ್ರ
ಮೃತ್ತಿಕೆಯ ನಿಟ್ಟರೆ, ಕೋಟಿ ತೀರ್ಥಗಳ
ಮುಳುಗಿರ್ದ ಫಲಸಿದ್ಧವೋ

ಎಂದಿದ್ದಾರೆ. ಮುಂದುವರೆದು "ಆ ಮಹಾ ತುಳಸಿಯ ವೃಂದಾವನವ ಸೋಂಕಿ ಅಂದಾ ಮರುತದಿಂದಾ ದೇಶಗ್ರಾಮ ಪಾವನವು... ಎಂದಿದ್ದಾರೆ.

ಶ್ರೀ ವಿಜಯದಾಸರು ತಮ್ಮ ಕೃತಿಯಲ್ಲಿ (ಶ್ರೀ ತುಳಸಿಯನು ಸೇವಿಸಿ)

ಕಂಡರೇ ದುರಿತಕ್ಕೆ ಕೆಂಡವದು
ಬೀರುವದು,
ಕೊಂಡಾಡಿದರೆ ಪುಣ್ಯ
ವಪರಿಮಿತವುಂಟು ಮೈ,
ದಿಂಡು ಗೆಡಹಿದರೆ ಪುನರಪಿ ಜನನವಿಲ್ಲ,

ಸಲೆದಂಡವಿಟ್ಟವ ಮುಕ್ತನೋ.......
ಮುಂದುವರೆದು

ತುಳಸಿ ಮಿಶ್ರಿತವಾದ
ನೈವೇದ್ಯಗತಿ ಸಾಧ್ಯ,
ತುಳಸಿ ಧರಿಸಿದ ದೇಹ
ಪರಮಸಾರ್ಥಕವಯ್ಯ,
ತುಳಸಿದಳವನು ಹರಿಗೆ
ಅರ್ಪಿಸಿದವರ ಪುಣ್ಯಕ್ಕೆ

ನೆಲೆಯ ನಾಕಾಣೆನಯ್ಯ
ಎಂದು ಕೊಂಡಾಡಿದ್ದಾರೆ.

ತುಳಸಿಯಿಲ್ಲದ ಸದನವು ಸದನವಲ್ಲವೆಂದು ವಿಜಯದಾಸರ ಅಭಿಪ್ರಾಯ. ಇದನ್ನು ತಮ್ಮ ಇದೇ ಕೃತಿಯಲ್ಲಿಯೇ

ತುಳಸಿ ಇಲ್ಲದ ಬೀದಿ ನರಕ
ಕೆಳಿಸುವ ಹಾದಿ
ತುಳಸಿ ಇಲ್ಲದ ತೀರ್ಥವೆಂದಿದ್ದರೂ
ವ್ಯರ್ಥ

ಎಂದಿದ್ದಾರೆ.

ಶ್ರೀ ಜಗನ್ನಾಥದಾಸರು "ಸಾರಿದ ಡಂಗುರ ಯಮನು" ಎಂಬ ಕೃತಿಯಲ್ಲಿ

...ಶ್ರೀ ತುಳಸಿ ಪೂಜೆ ಮಾಡದವಳ
ಹೆಡೆಮುರಿಕಟ್ಟಿ ಎಳೆದು ತನ್ನಿರೆಂದು,
ಸಾರಿದ ಡಂಗುರ ಯಮನು

ಎಂಬ ಎಚ್ಚರಿಕೆಯನ್ನೇ ನಮಗೆ ನೀಡಿದ್ದಾರೆ.

ಇಂತಹ ಪರಮಪಾವನಳಾದ ತುಳಸಿಯ ಮೂಲದಲ್ಲಿ ಸಕಲ ತೀರ್ಥಗಳ ಸನ್ನಿಧಾನ, ದಳದಳದಲ್ಲಿಯೂ ಶ್ರೀ ಕೃಷ್ಣನ ವಿಶೇಷ ವಾದ ಸನ್ನಿಧಾನ, ಮತ್ತು ದೇವರ್ಕಳ ಸನ್ನಿಧಾನ ತುಂಬಿಕೊಂಡಿದೆ. ವೈದ್ಯಶಾಸ್ತ್ರದ ಪ್ರಕಾರವಾಗಿ ತುಳಸಿಯು ದಿವ್ಯ ಔಷಧ ವಾಗಿದೆ. ತುಳಸಿಯ ಗಿಡದಿಂದ ಬೀಸುವ ಗಾಳಿಯು ಸಕಲರೋಗ ಪರಿಹಾರಕವೆಂಬು ದನ್ನು ವಿಜ್ಞಾನಿಗಳು ಒಪ್ಪಿದ್ದಾರೆ.

★

**ಶ್ರೀ ಹನುಮಂತಾಚಾರ್ಯ**

ಗೃಹಲಕ್ಷ್ಮಿ

# ದೇವಮಾತೆ ಅದಿತಿ

ಅದಿತಿಯು ಚಾಕ್ಷುಷ ಮನ್ವಂತರದ ಪ್ರಚೇತಸ ಪುತ್ರನಾದ ದಕ್ಷ ಪ್ರಜಾಪತಿಯ ಮಗಳು. ಈಕೆಯು ಬ್ರಹ್ಮನ ಮಗನಾದ ಮರೀಚಿ ಮಹರ್ಷಿಯ ಮಗನಾದ ಕಶ್ಯಪ ಮುನಿಯನ್ನು ಮದುವೆಯಾಗಿದ್ದಳು. ಈತನು ದಕ್ಷನ ಹದಿಮೂರು ಪುತ್ರಿಯರನ್ನು ಮದುವೆಯಾಗಿ ಸೃಷ್ಟಿ ಕಾರ್ಯದಲ್ಲಿ ಚತುರ್ಮುಖನಿಗೆ ಎರಡನೆಯವನಾಗಿದ್ದನು. ಈತ ಸಪ್ತರ್ಷಿಗಳಲ್ಲಿ ಒಬ್ಬ.

ಈಕೆಯು ಮನಸ್ಸು, ಶರೀರ, ಮಾತು ಹಾಗೂ ಕ್ರಿಯೆಗಳ ಮುಖಾಂತರ ಸದಾ ಪತಿಯ ಸೇವೆಯಲ್ಲಿ ನಿರತಳಾಗಿರುತ್ತಿದ್ದಳು. ಪತಿಯ ಆಜ್ಞೆಯಂತೆ ಅನೇಕ ರೀತಿಯ ಉತ್ತಮ, ಕಠೋರ ನಿಯಮಗಳನ್ನು ಅನೇಕ ವ್ರತಗಳನ್ನೂ ಪಾಲಿಸುತ್ತಾ ಧರ್ಮಾನುಷ್ಠಾನದಲ್ಲಿ ನಿರತಳಾಗಿರುತ್ತಿದ್ದಳು. ಈಕೆಯು ಭಗವಂತನ ಪರಮ ಭಕ್ತಳು. ಈಕೆಯು ಗರ್ಭದಿಂದ ಇಂದ್ರಾದಿ ದೇವತೆಗಳೂ, ವಾಮನನೂ ಜನಿಸಿದರು. ಅದಿತಿಯಲ್ಲಿ ಜನಿಸಿದವರಾದುದರಿಂದಲೆ ದೇವತೆಗಳಿಗೆ ಆದಿತ್ಯರು ಎಂಬ ಹೆಸರು ಬಂದಿತು.

ಅದಿತಿಯು ಅಮರಳೂ, ಅಜೇಯಳೂ ಆಗಿರುವಳು. ಈಕೆಯ ಮಗನಾದ ಇಂದ್ರನು ಮೂರು ಲೋಕಗಳ ಅಧಿಪತಿಯಾದರೂ ತಾನು ಭೋಗ, ವೈಭವಗಳನ್ನು ತುಚ್ಛೀಕರಿಸಿದ್ದಳು. ಧಾರ್ಮಿಕ ಹಾಗೂ ತಪೋಮಯ ಜೀವನವನ್ನು ಅನುಸರಿಸುತ್ತಿದ್ದಳು. ತನ್ನ ಆಶ್ರಮದಲ್ಲಿಯೆ ಇರುತ್ತಾ ಧರ್ಮ ಹಾಗೂ ಭಗವಂತನ ಪೂಜೆಯನ್ನು ಮಾಡುತ್ತಿದ್ದಳು.

ಈಕೆಯು ಸಾತ್ತ್ವಿಕಳಾದುದರಿಂದಈಕೆಯ ಮಕ್ಕಳಾದ ದೇವಗಣಗಳೂ ಕೂಡ ಸ್ವಭಾವತಃ ಸಾತ್ತ್ವಿಕರಾಗಿಯೆ ಇದ್ದರು. ಈ ರೀತಿಯ ಸಾತ್ತ್ವಿಕರಾದುದರಿಂದ ಜಗತ್ತಿನಲ್ಲಿ ದೇವತೆಗಳು ಪೂಜನೀಯರಾಗಿದ್ದಾರೆ. ಅಂತೆಯೆ ಯಜ್ಞದಲ್ಲಿ ಒಂದು ಭಾಗವನ್ನು ಇವರಿಗೆ ಸಮರ್ಪಿಸುತ್ತಿದ್ದರು.

ಈಕೆಗೆ ಹೋಲಿಕೆಯೋ ಎಂಬಂತೆ ಈಕೆಯ ತಂಗಿಯಾದ ದಿತಿಯಲ್ಲಿ ದೈತ್ಯರು ದಾನವರು ಜನಿಸಿ, ತಮೋಗುಣ, ರಜೋಗುಣಗಳ ಪ್ರತಿನಿಧಿಗಳಾಗಿದ್ದರು. ದೇವತೆಗಳ ಉತ್ಕರ್ಷವನ್ನು ಗಮನಿಸಿದ ದಾನವರು ಬಲಾತ್ಕಾರವಾಗಿ ದೇವತೆಗಳ ರಾಜ್ಯವನ್ನು ಅಪಹರಿಸಿದರು. ಇದರಿಂದ ದೇವತೆಗಳು ಸ್ವರ್ಗವನ್ನು ಬಿಡಬೇಕಾಯಿತು. ಕಾಡು ಮೇಡುಗಳಲ್ಲಿ, ಪರ್ವತಗಿರಿಗಳಲ್ಲಿ ಬಚ್ಚಿಟ್ಟುಕೊಂಡು ಓಡಾಡುತ್ತಿದ್ದ ತನ್ನ ಮಕ್ಕಳಾದ ದೇವತೆಗಳನ್ನು ಉದ್ಧರಿಸಲು ಸೂರ್ಯ ಭಗವಾನನನ್ನು ಕುರಿತು ತಪಸ್ಸು ಮಾಡಲು ಅದಿತಿಯು ಪ್ರಾರಂಭಿಸಿದಳು.



ಬಹಳ ದಿನಗಳವರೆಗೆ ತಪಸ್ಸು ಮಾಡಿದ ನಂತರ ಸೂರ್ಯಭಗವಾನನು ಪ್ರತ್ಯಕ್ಷನಾಗಿ ದೇವತೆಗಳ ಶತ್ರುಗಳನ್ನು ನಾಶ ಮಾಡಲು ತಾನೇ ಸ್ವತಃ ಆಕೆಯಲ್ಲಿ ಜನಿಸುವುದಾಗಿ ತಿಳಿಸಿ, "ದೇವಿ! ನನ್ನ ಸಾವಿರದ ಒಂದನೆ ಅಂಶವು ನಿನ್ನಲ್ಲಿ ಬಾಲಕನಾಗಿ ಜನಿಸುವುದು!" ಎಂದು ವರವನ್ನು ನೀಡಿ ಅಂತರ್ಧಾನನಾದನು.

ಅದಿತಿಯು ತನ್ನ ಮನೋರಥವು ಸಿದ್ಧಿಯಾದುದಕ್ಕೆ ಸಂತೋಷಗೊಂಡು ತನ್ನ ದೈನಂದಿನ ಸೇವಾಕಾರ್ಯಗಳಲ್ಲಿ ನಿರತಳಾದಳು. ಸೂರ್ಯನ ಅಂಶವು ಆಕೆಯ ಗರ್ಭದಲ್ಲಿ ನಿವಸಿಸತೊಡಗಿತು. ತನ್ನುದರದಲ್ಲಿ ಪವಿತ್ರ ಗರ್ಭವು ಧಾರಣೆಯಾದುದಕ್ಕೆ ಏಕಾಗ್ರಚಿತ್ತದಿಂದ ಕೃಚ್ಛ್ರ ಹಾಗೂ ಚಾಂದ್ರಾಯಣ ಇತ್ಯಾದಿ ವ್ರತಗಳ ಪಾಲನೆ ಮಾಡಲು ಪ್ರಾರಂಭಿಸಿದಳು. ಇಂತಹ ಕಠೋರ ನಿಯಮಗಳಿಂದ ಕೋಪಗೊಂಡ ಕಶ್ಯಪನು, "ನಿತ್ಯ ಉಪವಾಸಗಳನ್ನು ಮಾಡಿ ಗರ್ಭದಲ್ಲಿರುವ ಮಗುವಿಗೆ ಯಾಕೆ ಅಪಾಯವನ್ನು ಉಂಟು ಮಾಡುತ್ತೀ?" ಎಂದು ಕೇಳಿದನು. ಆಗ ಅದಿತಿಯೂ ರುಷ್ಟಳಾಗಿ ಹೇಳಿದಳು,

"ನೋಡಿ, ಇದು ಗರ್ಭದಲ್ಲಿನ ಮಗು! ನಾನು ಇದನ್ನು ಕೊಲ್ಲುತ್ತಿಲ್ಲ, ಬದಲಾಗಿ ಶತ್ರುಗಳನ್ನು ಕೊಲ್ಲುವಷ್ಟು ಬಲಶಾಲಿಯಾಗುತ್ತಾನೆ".

ಹೀಗೆಂದು ಹೇಳಿದವಳೆ ಆಗಲೆ ಗರ್ಭವನ್ನು ಪ್ರಸವಿಸಿದಳು. ಉದಯಕಾಲದ ಸೂರ್ಯನ ಸಮನಾದ ತೇಜಸ್ವಿಯೂ, ಮೊಟ್ಟೆಯಾಕಾರದಲ್ಲಿಯೂ ಇದ್ದ ಗರ್ಭವು ಇದ್ದಕ್ಕಿದ್ದಂತೆ ಪ್ರಕಾಶಗೊಂಡಿತು. ಅದನ್ನು ನೋಡಿದ ಕೂಡಲೆ ಕಶ್ಯಪ ಮುನಿಯು ವೈದಿಕ ವಾಣಿಯ ಮುಖಾಂತರ ಆದರ ಪೂರ್ವಕವಾಗಿ ಅದರ ಸ್ತವನ ಮಾಡಿದನು. ಇದರಿಂದ ಸುಪ್ರೀತವಾದ ಆ ಮೊಟ್ಟೆಯು ಗರ್ಭದಿಂದ ಓರ್ವ ಬಾಲಕನು ಹೊರ ಬಂದನು. ಪದ್ಮ ಪತ್ರ ಸಮಾನವಾದ ಆ ಬಾಲಕನ ಅಂಗಾಂಗಗಳ ಶೋಭೆಯು ದಶ ದಿಕ್ಕುಗಳಲ್ಲೂ ಹರಡಿತು. ಅದೇ ಸಮಯದಲ್ಲಿ ಮೇಘಸಮಾನ ಗರ್ಜನೆಯು ಕಶ್ಯಪ ಮುನಿಗೆ ಕೇಳಿ ಬಂದಿತು.

"ಹೇ ಮುನಿ! ನೀನು ಅದಿತಿಯೊಂದಿಗೆ 'ತ್ವಯಾ ಮಾರಿತಮ್ ಅಂಡಮ್' (ನೀನು ಗರ್ಭದಲ್ಲಿನ ಮಗುವನ್ನು ಕೊಲ್ಲುತ್ತಿರುವೆ)

'ರಘುಸುತ'

ಎಂದು ಹೇಳಿದ್ದುದರಿಂದ ನಿನ್ನ ಈ ಮಗನ ಹೆಸರು ಮಾರ್ತಾಂಡ ಎಂದು ವಿಖ್ಯಾತ ಗೊಳ್ಳುತ್ತದೆ. ಅಂತೆಯೆ ಯಜ್ಞ ಭಾಗ ವನ್ನು ಅಪಹರಿಸುವ ಶತ್ರು ಭೂತ ಅಸುರ ರನ್ನು ಸಂಹಾರ ಮಾಡುವನು".

ಈ ಅಶರೀರವಾಣಿಯನ್ನು ಆಲಿಸಿ ದೇವತೆ ಗಳು ಸಂತೋಷಗೊಂಡು ದೈತ್ಯರನ್ನು ಯುದ್ಧಕ್ಕೆ ಆಹ್ವಾನಿಸಿದರು. ದಾನವರು ಸೋತು ಓಡಿಹೋದರು. ದೇವತೆಗಳಿಗೆ ಮೊದಲಿನಂತೆ ಅವರ ಅಧಿಕಾರ, ಯಜ್ಞ ಭಾಗಗಳು ಲಭ್ಯವಾದವು.

ಕೆಲವು ಕಲ್ಪಗಳ ನಂತರ ಮತ್ತೆ ದೈತ್ಯರು ದೇವತೆಗಳ ಸರ್ವಸ್ವವನ್ನೂ ಅಪಹರಿಸಿದರು. ಅವರ ಭಯಕ್ಕೆ ಸ್ವರ್ಗದಿಂದ ಓಡಿ ಹೋಗಿ, ದೇವತೆಗಳು ಮಂದರ ಪರ್ವತಗಳ ಗುಹೆ ಗಳಲ್ಲಿ ತಿರುಗಾಡತೊಡಗಿದರು. ಆಗ ಅದಿತಿಯು ಕಶ್ಯಪನನ್ನು ಹೀಗೆಂದು ಕೇಳಿದಳು.

"ಅಸುರರು ಮತ್ತು ಸುರರು ಇಬ್ಬರೂ ನಿಮ್ಮ ಮಕ್ಕಳೆ. ಇಬ್ಬರ ಮೇಲೂ ನಿಮ್ಮ ಸಮಾನ ಸ್ನೇಹವಿದೆ ಎನ್ನುವುದು ನನಗೆ ಗೊತ್ತು. ಆದರೆ ಅಸುರರು ನಮ್ಮ ಸ್ಥಾನ ಗಳನ್ನು ಭಿನ್ನವಾಗಿ ಹೊಂದಿರುವುದೇ ಅಲ್ಲದೆ ನನ್ನ ಮಕ್ಕಳ ಸ್ಥಾನಗಳನ್ನೂ ಅಪಹರಿಸಿರು ವರು. ನನ್ನ ಮಕ್ಕಳು ಈ ವಿಪತ್ತಿನಿಂದ ದೂರವಾಗುವ ಮಾರ್ಗವನ್ನು ತೋರಿಸಿ ಕೊಡಿ!"

"ಯಾರು ಮಕ್ಕಳು, ಯಾರು ತಾಯಿ! ಭಗವಂತನ ಲೀಲಾವಿನೋದವಿದು. ಅದರಿಂದ ನೀನು ಪರಮಾತ್ಮನನ್ನು ಕುರಿತು ಧ್ಯಾನಿಸು!"

"ನನಗೆ ನೀವೇ ಪರಮಾತ್ಮ, ಪತಿಯೇ ಪರದೈವ. ನಿಮ್ಮನ್ನು ಪೂಜಿಸುವ ಮಾರ್ಗ ವನ್ನು ಉಪದೇಶ ಮಾಡಿ!" ಬಹಳ ನಮ್ರತೆ ಯಿಂದ ದೇವ ಮಾತೆಯು ಕೇಳಿದಳು.

"ಬ್ರಹ್ಮ ಭಗವಾನನು ಈ ವ್ರತವನ್ನು ನನಗೆ ಉಪದೇಶಮಾಡಿದ. ಅದರಿಂದ ಎಚ್ಚ ರಿಕೆಯಿಂದ ಆಲಿಸು." ಮಹರ್ಷಿ ಕಶ್ಯಪನು ಉಪದೇಶವನ್ನು ಪ್ರಾರಂಭಿಸಿದನು ಫಾಲ್ಗುಣ ಅಮಾವಾಸ್ಯೆಯಂದು ವರಾಹವು ಅಗೆದಿರುವ ಮಣ್ಣನ್ನು ಶರೀರಕ್ಕೆಲ್ಲ ಲೇಪಿಸಿ ಕೊಂಡು, ಮಂತ್ರ ಸಹಿತ ಸ್ನಾನ ಮಾಡ ಬೇಕು. ಮೂರ್ತಿರೂಪದಲ್ಲಿ, ಸೂರ್ಯ ಚಂದ್ರರು, ನೀರಿನಲ್ಲಿ, ಅಗ್ನಿಯಲ್ಲಿ, ಅಂತೆಯೆ ಹೃದಯದಲ್ಲಿ ಭಗವಂತನ ಪೂಜೆ ಮಾಡ ಬೇಕು. ಮಂತ್ರದ ಮುಖಾಂತರ ಮರಕತ ಶ್ಯಾಮನಾದ ಭಗವಂತನ ಸ್ತುತಿಯನ್ನು ಮಾಡಿ, ಅವನನ್ನು ಆವಾಹನೆ ಮಾಡಿಕೊಳ್ಳ ಬೇಕು. ನಂತರ ಷೋಡಶೋಪಚಾರದಿಂದ

---

ವಿಧಿಪೂರ್ವಕವಾಗಿ ಅವನ ಪೂಜೆ ಮಾಡಬೇಕು. ತುಪ್ಪ, ಬೆಲ್ಲಗಳಿಂದ ಕೂಡಿದ ಅಕ್ಕಿಯಿಂದ ಮಾಡಿದ ಪಾಯಸವನ್ನು ಹನ್ನೆರಡು ರೀತಿಗಳಲ್ಲಿ ಅಗ್ನಿಯಲ್ಲಿ ಆಹುತಿ ನೀಡಬೇಕು. ಅಲ್ಲಿ ಯಾರಾದರೂ ಭಗವದ್ಭಕ್ತರು ಇದ್ದರೆ ಅವರಿಗೆ ಈ ಪಾಯಸದ ಪ್ರಸಾದವನ್ನು ನೀಡಿ, ಆ ನಂತರ ಪರಮಾತ್ಮನಿಗೆ ತಾಂಬೂಲವನ್ನು ನೀಡಬೇಕು. ಅಷ್ಟೋತ್ತರ-ಶತಗೋಪಾಲ ಮಂತ್ರವನ್ನು ಜಪಿಸುತ್ತಾ ಭಗವಂತನನ್ನು ಸ್ತುತಿಸಬೇಕು. ಭಕ್ತರ ಆಜ್ಞೆಯನ್ನು ಪಡೆದ ನಂತರ ಆ ಪಾಯಸವನ್ನು ಸ್ವೀಕರಿಸಬೇಕು. ಕನಿಷ್ಟ ಇಬ್ಬರು ಬ್ರಾಹ್ಮಣರಿಗೆ ಊಟವನ್ನು ಮಾಡಿಸಬೇಕು. ಬ್ರಹ್ಮಚರ್ಯ ಪುರಸ್ಸರವಾಗಿ ರಾತ್ರಿ ಭೂಶಯನ ಮಾಡಬೇಕು. ಪ್ರಾತಃ ಸ್ನಾನಾದಿಗಳನ್ನು ಮಾಡಿ ವಿಧಿಪೂರ್ವಕವಾಗಿ ಭಗವಂತನಿಗೆ ದುಗ್ಧಸ್ನಾನ ಮಾಡಿಸಬೇಕು. ಹಿಂದಿನ ತರಹವೆ ಬ್ರಾಹ್ಮಣ ಭೋಜನ ಹಾಗೂ ಹವನಗಳನ್ನು ಮಾಡಿಸಬೇಕು. ಆ ನಂತರ ಪರಮಾತ್ಮನ ಅಭಿಷೇಕದ ಹಾಲನ್ನು ಮಾತ್ರ ಸ್ವೀಕರಿಸಬೇಕು.

"ಫಾಲ್ಗುಣ ಶುಕ್ಲ ತ್ರಯೋದಶಿಯವರೆಗೆ ಭೂಶಯನ, ಬ್ರಹ್ಮಚರ್ಯ ಪಾಲನೆ ಹಾಗೂ ತ್ರಿಕಾಲಗಳಲ್ಲೂ ಸ್ನಾನ ಸಂಧ್ಯಾವಂದನಾದಿ ನಿಯಮಗಳನ್ನು ಪಾಲಿಸಬೇಕು. ಅನ್ಯ ಪುರುಷರೊಂದಿಗೆ ಮಾತನ್ನಾಡಬಾರದು. ಯಾವುದೇ ಭೋಗವಸ್ತುವನ್ನೂ ಸೇವಿಸಬಾರದು. ಸದಾ ಕಾಲದಲ್ಲೂ ಪರಮಾತ್ಮನ ಧ್ಯಾನದಲ್ಲಿ ತಲ್ಲೀನಳಾಗಿರಬೇಕು.

"ತ್ರಯೋದಶಿಯಂದು ಶಾಸ್ತ್ರಾನುಸಾರ ಭಗವಂತನಿಗೆ ಪಂಚಾಮೃತದ ಸ್ನಾನ ಮಾಡಿಸಿ, ಬ್ರಾಹ್ಮಣರ ಮುಖಾಂತರ ಭಗವಂತನ ಮಹಾಪೂಜೆಯನ್ನು ಮಾಡಿಸಬೇಕು. ಹಾಲಿನ ಹವಿಸ್ಸನ್ನು ಸಿದ್ಧಗೊಳಿಸಿ ಅದರ ಹವನ ಮಾಡಬೇಕು. ಭಗವಂತನಿಗೆ ವಿವಿಧ ರೀತಿಗಳ ನೈವೇದ್ಯವನ್ನು ಸಮರ್ಪಿಸಬೇಕು. ಆಚಾರ್ಯ ಪೂಜೆಯನ್ನು ನೆರವೇರಿಸಿದ ನಂತರ ದಕ್ಷಿಣೆಯ ಸಹಿತ ಋತ್ವಿಜರನ್ನು ಸಂತುಷ್ಟಗೊಳಿಸಬೇಕು. ಎಲ್ಲ ಜಾತಿಯ ಜನರಿಗೂ, ಸೇವಕರಿಗೂ ಚಂಡಾಲರು ಹಾಗೂ ನಾಯಿಗಳಿಗೂ ಊಟ ನೀಡಬೇಕು. ಎಲ್ಲರ ಊಟವಾದ ನಂತರ ಸಕುಟುಂಬ ಸಮೇತಳಾಗಿ ಸ್ವಯಂ ಊಟ ಮಾಡಬೇಕು.

"ವ್ರತ ಮಾಡುವ ದಿನಗಳಲ್ಲಿ ಭಗವಂತನ ಸತ್ಕಥಾ ಕಾಲಕ್ಷೇಪ, ಸಂಕೀರ್ತನೆ, ವಾದ್ಯ ಸಹಿತ ಗಾನ ಸಮರ್ಪಣೆಗಳು ನಡೆಯಬೇಕು."

ಈ ರೀತಿಯಲ್ಲಿ ವ್ರತದ ನಿಯಮಗಳನ್ನು ಕಶ್ಯಪನು ತಿಳಿಸಿದ. ಶ್ರೀಮದ್ಭಾಗವತದ ಅಷ್ಟಮ ಸ್ಕಂದದಲ್ಲಿ ಹದಿನಾರನೆಯ ಅಧ್ಯಾಯದಲ್ಲಿ ಈ ವ್ರತದ ಸಂಪೂರ್ಣ ವಿವರಗಳು, ಸ್ತುತಿ ಹಾಗೂ ಮಂತ್ರಗಳ ವಿವರಗಳಿವೆ.

ಪತಿಯನ್ನು ಪೂಜಿಸಿ, ಅದಿತಿಯು ವ್ರತವನ್ನು ಪ್ರಾರಂಭಿಸಿದಳು. ಬಹಳ ಕಷ್ಟ, ಶ್ರಮಗಳನ್ನು ಎದುರಿಸಿ, ವ್ರತವನ್ನು ಪೂರ್ಣಗೊಳಿಸಿದಳು. ಘನಶ್ಯಾಮನೂ, ಶಂಖಚಕ್ರಗದಾ ಪದ್ಮಧಾರಿಯೂ, ಪೀತಾಂಬರಧಾರಿಯೂ ಆದ ಚತುರ್ಭುಜ ಶ್ರೀಮನ್ನಾರಾಯಣನು ಪ್ರತ್ಯಕ್ಷನಾದನು. ಅದಿತಿಯು ತನ್ನ ಜನ್ಮ ಸಫಲವಾಯಿತೆಂದು ಭಾವಿಸಿದಳು. ಆನಂದ ತುಂದಿಲಳಾದ ದೇವಮಾತೆಯು ಆ ದೇವದೇವನನ್ನು ಕೊಂಡಾಡಿದಳು. ಆಗ ಪರಮಾತ್ಮನು,

"ದೇವಿ! ನಿನ್ನ ಮನದಭಿಲಾಷೆ ನನಗೆ ತಿಳಿದಿದೆ. ನಿನ್ನ ಪುತ್ರರ ವಿಜಯ ಹಾಗೂ ಅಸುರರ ಪರಾಭವವನ್ನು ಇಚ್ಛಿಸುತ್ತಿರುವೆ. ಆದರೆ ದೇವಿ ಈಗ; ಅಸುರರೇನೊ ಅಜೇಯರಾಗಿಯೆ ಇದ್ದಾರೆ. ಅವರ ಮೇಲೆ ಈಶ್ವರ ಕಟಾಕ್ಷವಿದೆ. ನೀನು ನನ್ನ ಪೂಜೆ ಮಾಡಿರುವುದರಿಂದ ಅದು ನಿಷ್ಫಲವಾಗಲಾರದು. ನಿನ್ನ ಇಚ್ಛೆಯನ್ನು ಪೂರ್ಣಗೊಳಿಸಲು ನಾನು ನಿನ್ನ ಮಗನಾಗಿ ಜನಿಸಿ, ನಿನ್ನ ಮಕ್ಕಳ ರಕ್ಷಣ ಕಾರ್ಯವನ್ನು ನಿರ್ವಹಿಸುವೆನು."

ಹೀಗೆಂದು ಆಶ್ವಾಸನೆ ನೀಡಿ, ಪರಮಾತ್ಮನು ಅಂತರ್ಧಾನನಾದನು. ನಂತರ ವಾಮನನಾಗಿ ಜನ್ಮವೆತ್ತಿದ. ಈ ರೀತಿಯಲ್ಲಿ ಶ್ರೀಮನ್ನಾರಾಯಣನು ಮಾನವ ಜನ್ಮವೆತ್ತಲು ಪ್ರಾರಂಭಿಸಿದ್ದು ಅದಿತಿಯಿಂದಲೇನೆ. ಆ ಗೌರವ ಅದಿತಿಗೆ ಲಭಿಸಿದ್ದು ಆಕೆಗೆ ಪರಮಾತ್ಮನು ತೋರಿದ ಕರುಣೆಯೆಂದೇ ಭಾವಿಸಬೇಕು.

ವಾಮನನು ಬಲಿಯನ್ನು ಅವನ ಪರಿವಾರ ಸಮೇತ ಸುತಲ ಲೋಕಕ್ಕೆ ಕಳುಹಿಸಿದ. ಮುಂದಿನ ಕಲ್ಪದಲ್ಲಿ ಉಪೇಂದ್ರನಾಗಿ ದೇವಮಾತೆಗೆ ನೀಡಿದ ಮಾತನ್ನು ಕಾಪಾಡಿಕೊಂಡನು.

ಭೂಮಿಯ ಮೇಲೆ ಮಕ್ಕಳಿಗಾಗಿ ತಾಯಿಯಾದವಳು ಯಾವ ರೀತಿ ಶ್ರಮಿಸಬೇಕು, ಯಾವ ರೀತಿಯಲ್ಲಿ ಅವರ ಸುಖದುಃಖಗಳ ನಿರ್ಣಾಯಕಳಾಗಬೇಕು ಎಂಬುದಕ್ಕೆ ಅದಿತಿಯು ಮುಂದಿನ ಮಾತೆಯರಿಗೆ ಆದರ್ಶಪ್ರಾಯಳಾದಳು. ಇದರೊಂದಿಗೆ ಸವತಿ ಮಾತ್ಸರ್ಯದ ದಮನ, ಸವತಿ ಮಕ್ಕಳೊಂದಿಗೆ ಯಾವ ರೀತಿ ವಿಶ್ವಾಸದಿಂದ ಇರಬೇಕು, ಅವರುಗಳು ಇನ್ನೂ ದುಷ್ಟರಾದಾಗ ಅವರ ಶಿಕ್ಷೆಯನ್ನು ಯಾವ ರೀತಿ ನಡೆಯಿಸಬೇಕು ಎಂಬುದನ್ನು ಅದಿತಿಯು ತೋರಿಸಿಕೊಟ್ಟಳು. ಈ ದೃಷ್ಟಿಯಿಂದ ಮುಂದಿನ ಮಾತೆಯರಿಗೆ ಆದರ್ಶಪ್ರಾಯಳಾದ ಈ ದೇವಮಾತೆ ಅದಿತಿಯು ಸದಾ ನಮ್ಮ ನೆನಪಿನಲ್ಲಿಡುವುದಕ್ಕೆ ಯೋಗ್ಯಳಾದವಳು.

(ಆಧಾರದಿಂದ)

★

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

**ಪುಸ್ತಕವಿಮರ್ಶೆ**

# ಶ್ಲಾಘ್ಯ ಪ್ರಯತ್ನ

**ರುಕ್ಮಿಣೀವರದ**

(ಹರಿದಾಸ ಸಾಹಿತ್ಯ ಕೃತಿಗಳು).
ಲೇಖಕಿ: ರುಕ್ಮಿಣಿ ಗಿರಿಮಾಜಿ.
ಪ್ರಕಾಶಕರು:
ಶ್ರೀಮತಿ ಗಿರಿಮಾಜಿ ವೆಂಕೂಬಾಯಿ
ನಂ. 156. 13ನೆ 'ಬಿ' ಮುಖ್ಯರಸ್ತೆ,
ಮತ್ತೀಕೆರೆ ಲೇಔಟ್,
ಗೋಕುಲ ಮೊದಲ ಹಂತ,
ಬೆಂಗಳೂರು–54.
1984; ಪು. 84, ರೂ. 6–50.

ಕಳೆದ ನಾನೂರು ವರ್ಷಗಳ ಸಾಹಿತ್ಯೇತಿಹಾಸದಲ್ಲಿ ಎಲ್ಲ ಭಾರತೀಯ ಭಾಷೆಗಳಿಗೂ ನವಚೈತನ್ಯದ ಸ್ಫೂರ್ತಿಸೆಲೆ ಭಕ್ತಿಭಾವದಿಂದ ಪ್ರಚೋದಿತವಾಗಿದೆ. ಕನ್ನಡದಲ್ಲಿಯಂತೂ ಭಗವಂತನ ನಾಮಸ್ಮರಣೆ, ಭಜನೆ, ಸಂಕೀರ್ತನೆಗಳಿಗೇ ಮೀಸಲಾಗಿದೆ ಹರಿದಾಸ ಸಾಹಿತ್ಯ. ಸಂಗೀತಸಾಹಿತ್ಯ ಕಲೆಗಳ ಮಧುರ ಮಿಲನದಿಂದ, ಭಗವಂತನ ಮಹಾಮಹಿಮೆಯನ್ನು ಸಾಕ್ಷಾತ್ಕರಿಸಿದ ಕನಕದಾಸ ಪುರಂದರದಾಸರಂತಹ ಸಂತಶಿರೋಮಣಿಗಳು ಸಾಮಾನ್ಯಜನರು ಕೂಡ ದಿವ್ಯಾನಂದವನ್ನು ಆಸ್ವಾದಿಸುವಂತಹ ಕೃತಿರತ್ನಗಳನ್ನು ರಚನೆಮಾಡಿ ಅಮರರಾಗಿದ್ದಾರೆ. ಅವರ ರಚನೆಗಳು ಪಂಡಿತ–ಪಾಮರರೆಲ್ಲರನ್ನೂ ಏಕರೀತಿಯಾಗಿ ರಂಜಿಸುತ್ತ, ಆಸ್ತಿಕ್ಯವನ್ನು ಬೆಳೆಸುತ್ತ, ಧಾರ್ಮಿಕಶ್ರದ್ಧೆಯ ಗಟ್ಟಿ ನೆಲಗಟ್ಟನ್ನು ಕಟ್ಟಿವೆ.

ಕಾಲಗತಿಯಿಂದ ಈ ಬಗೆಯ ಕೃತಿರಚನೆ ಹಿಂದೆಬಿದ್ದಿದ್ದರೂ. ಅದನ್ನು ಪುನರುಜ್ಜೀವಿಸುವ ಶ್ಲಾಘ್ಯ ಪ್ರಯತ್ನವನ್ನು ಈ ಮಾನ್ಯ ಲೇಖಕಿಯವರು ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ರಾಗ–ರಸಗಳ, ತಾಳ–ಮೇಳಗಳ, ಪ್ರಾಸ–ಗಮಕಗಳ ಸುಂದರ ಸಮನ್ವಯದಿಂದ, ಅತಿಲಲಿತವೂ ಸರಲವೂ ಸುಮಧುರವೂ ಆದ ಹಾಡುಗಳನ್ನು ಹಿಂದಿನವರ ಮಾದರಿಯಲ್ಲೇ ಅಣಿಗೊಳಿಸಿದ್ದಾರೆ. ಒಮ್ಮೆ ಪೌರಾಣಿಕ ಕಥೆಗಳ, ಇನ್ನೊಮ್ಮೆ ಕಲ್ಪಿತ ಮಹಿಮಾತಿಶಯಗಳ, ಮತ್ತೊಮ್ಮೆ ಸಾಕ್ಷಾತ್ಕರಿಸಿದ ಭಕ್ತಿಯ ಆನಂದಾನುಭವದ ಸರಸೋನ್ಮೇಷ–ಇಲ್ಲೆಲ್ಲ ಚೇತೋಹಾರಿಯಾಗಿದೆ. ನಿರ್ಮಲ ಹೃದಯದ ಈ ಉದ್ಗಾರ ಸಮಾನ ಚಿತ್ತವೃತ್ತಿಯ ಸಹೃದಯರನ್ನು ಆಕರ್ಷಿಸುತ್ತದೆ, ಚಿತ್ತಶುದ್ಧಿಯನ್ನು ಪಡೆಯಲು ನೆರವೀಯುತ್ತದೆ.

ಇಲ್ಲಿಯ ಅಭಿವ್ಯಕ್ತಿ ಸಹಜವಾದ ರೂಪಕ ವಿರೋಧಾದಿ ಅಲಂಕಾರಗಳನ್ನೂ ಮೈಗೂಡಿಸಿಕೊಳ್ಳಬಲ್ಲುದು; ಜಾನಪದ ವಾಕ್ಯವಿನ್ಯಾಸದ ಚೆಲುವನ್ನು ತನ್ನದಾಗಿಸಿಕೊಳ್ಳಬಲ್ಲದು. 'ಯಾರರಿಯಬಲ್ಲರೋ ವೈಪರೀತ್ಯಗಳಾ' (ಪು. 4), 'ಈ ಮುದ್ದು ಮೂರುತಿಯು ನೆಲಸಿಹುದು ನೋಡೆ (ಪು. 44)' 'ಅಕ್ಕ ನೀ ನೋಡಮ್ಮಾ, ಈ ವಾಮನನಾ (ಪು. 75) ಮುಂತಾದವು ಇದಕ್ಕೆ ನಿದರ್ಶನಗಳು. ಶೀರ್ಷಿಕೆಯನ್ನೊದಗಿಸಿರುವ 'ರುಕ್ಮಿಣೀವರದ' ಶ್ರೀಕೃಷ್ಣಪರಮಾತ್ಮನೇ. ಅವನ ನಾನಾ ಲೀಲಾವರ್ಣನೆಗಳೇ ಇಲ್ಲಿಯ ವಸ್ತು. ಅದರಲ್ಲಿಯೂ ಸಪ್ತಗಿರಿಯ ವೆಂಕಟೇಶ್ವರನ ಮಹಿಮೆ ಮೇಲಿಂದ ಮೇಲೆ ಮೇಳೈಸಿ ಬರುವುದೊಂದು ಸೊಬಗು. ಈ ಪರಂಪರೆಯನ್ನು ಜೀವಂತವಾಗಿರಿಸುವ ಮಹತ್ಕಾರ್ಯ ಈ ಮಾನ್ಯ ಲೇಖಕಿಯರಿಂದ ಮುಂದುವರೆಯಲೆಂದು ಹಾರೈಸುತ್ತೇವೆ.

**—ಡಾ|| ಕೆ. ಕೃಷ್ಣಮೂರ್ತಿ**

# ದಾಸರ ಪದಗಳಲ್ಲಿ ರಾಗ

ದಾಸಸಾಹಿತ್ಯವನ್ನು ಕುರಿತು-ಇದು ರಾಗದ ವಿಧಪಲುಕುಗಳವಿನ್ಯಾಸಕ್ಕಾಗಿ ವಾಗ್ಗೇಯಕಾರರು ರಚಿಸಿದಂತಹ ಸಾಹಿತ್ಯವೇ? ರಾಗದಿಂದ ಹಾಡಲು ಅನುಕೂಲವಾಗುವಂತಹ ಕವಿತೆಗಳೇ? ಎಂಬುದು ಚರ್ಚಾಸ್ಪದವಾದ ವಿಷಯ. ಏಕೆಂದರೆ ಎರಡು ಅಭಿಪ್ರಾಯಗಳಿಗೂ ಬೇಕಾದ ವಸ್ತು ಇದರಲ್ಲಿದೆ. ಗಮಕಿಗಳು ಹಾಡುವ ಕಾವ್ಯಗಳಿಗಿಂತ ಇದು ಬೇರೆ, ಅಂದರೆ ಹಾಡುಗಬ್ಬದ ರೀತಿಯಲ್ಲ. ತ್ಯಾಗರಾಜ ಮೊದಲಾದವರ ಕೀರ್ತನೆಗಳ ಹಾಗೆ ಇದರಲ್ಲಿ ವಿವಿಧ ಸಂಗತಿಗಳೂ ಇಲ್ಲ, ಒಂದು ರಚನೆಯನ್ನು ಒಂದೇ ರಾಗ-ತಾಳಗಳಲ್ಲಿ ಹಾಡಬೇಕೆಂಬ ನಿರ್ಬಂಧವೂ ಇಲ್ಲ. ಇದಕ್ಕೆ ಎರಡು ಅಭಿಪ್ರಾಯಗಳನ್ನೂ ಸಮರ್ಥಿಸಬಹುದು, ಅದು ಬೇರೆಮಾತು.

ಈ ರೀತಿಯ ರಚನೆ ಕನ್ನಡ ಸಾಹಿತ್ಯದ ಒಂದು ವೈಶಿಷ್ಟ್ಯವೆಂದು ಕನ್ನಡಸಾಹಿತ್ಯದ ವಿಶೇಷತೆಯಲ್ಲಿ ಇದನ್ನು ಸೇರಿಸಿದವರಿದ್ದಾರೆ. ಇದು ದ್ವೈತಸಿದ್ಧಾಂತ ತತ್ತ್ವಕ್ಕೆಮಾತ್ರ ಸೀಮಿತವಾದದ್ದು. ಸಾಹಿತ್ಯದ ಮಾನದಂಡ ಯಾವುದು?ಜೀವನದ ಅನುಭವವನ್ನು ವೈವಿಧ್ಯಪೂರ್ಣವಾಗಿ, ಪರಿಣಾಮಕಾರಿಯಾಗಿ ಅಭಿವ್ಯಕ್ತಗೊಳಿಸುವುದು ಸಾಹಿತ್ಯದ ಕೆಲಸ. ಯಾವಕಾಲದ ಸಾಹಿತ್ಯವೇ ಇರಲಿ, ಅದು ಓದುಗನ ಅನುಭವದೊಡನೆ ಈಗಲೂ ಸಂವಾದಗೊಂಡು ಸ್ಪಂದಿಸಿ 'ಅಹಾ! ಹೌದಲ್ಲ, ಇದು ಹೀಗೆ ಎಂದು ನನಗೂ ಅನಿಸಿದೆ. ನಾನು ಬರೆಯುವುದಾದರೆ ಹೀಗೆಯೇ ಬರೆಯುತ್ತಿದ್ದೆನಲ್ಲ' ಎಂದು ಅನಿಸಬೇಕು. ಯಾವ ಮತದ ಛಾಯೆಯೇ ಇರಲಿ; ಅದು ಕೊಡುವ ಅನುಭವ ಮನುಷ್ಯ ಸಾಮಾನ್ಯನ ಮನಸ್ಸಿಗೆ ಮುಟ್ಟಿ ಎಚ್ಚರಿಸಿದರೆ ಸಾಕು, ಅದೇ ಸಾಹಿತ್ಯದ ಮೌಲಿಕತೆ.

ಸಾಮಾನ್ಯವಾಗಿ ದಾಸರ ಹಾಡುಗಳು ಭಜನೆ–ಹರಿಕತೆ – ಯಕ್ಷಗಾನ – ಬೀದಿಹಾಡುಗಳು (ಲಾವಣಿ) ಮುಂತಾದುವುಗಳಲ್ಲಿ ಬಳಕೆಯಾಗಿವೆ. ಹರಿಕತೆಯಲ್ಲಿ ಎಲ್ಲ ಸನ್ನಿವೇಶಗಳಲ್ಲೂ ಅವನ್ನು ಬಳಸುತ್ತಾರೆ, ಯಕ್ಷಗಾನದಲ್ಲೂ ಕೆಲವೆಡೆ ಆ ಹಾಡುಗಳನ್ನೇ ಬಳಸುವುದೂ ಇದೆ. ಇನ್ನು ಈಚೆಗಿನ ಕಾಲದಲ್ಲಿ ಸಂಗೀತ ಕಚೇರಿ – ಭರತನಾಟ್ಯ – ಸಿನಿಮಾಗಳಲ್ಲೂ ಹೇರಳವಾಗಿ ಬಳಸುವುದು ಕಂಡುಬರುತ್ತದೆ.

ಮೊದಲು ಸುಮಾರು ಐವತ್ತು ವರ್ಷಗಳ ಹಿಂದೆ ಸಂಗೀತ ಕಚೇರಿಯಲ್ಲಿ ಕೊನೆಗೆ ಒಂದೆರಡು ದೇವರ ನಾಮಗಳನ್ನು ಹಾಡಿ ಸಂಗೀತ ಕಚೇರಿಯನ್ನು ಮುಗಿಸುತ್ತಿದ್ದರು. ಈಗ ಕನ್ನಡದಲ್ಲೇ ಸಂಗೀತಕಚೇರಿ ಎಂಬ ಧೋರಣೆ ಬಂದು ಈ ಕಚೇರಿಯನ್ನು ದೇವರ ನಾಮಗಳಿಂದಲೇ ನಡೆಸಿದ್ದೂ ಇದೆ.

ಭರತನಾಟ್ಯದಲ್ಲಿ – ಪದಾಭಿನಯ ಭಾಗದಲ್ಲಿ'ಕೃಷ್ಣ ನೀ ಬೇಗನೆ ಬಾರೋ'ಮುಂತಾದ ಒಂದೆರಡು ಹಾಡುಗಳನ್ನು ಮೊದಲು ಅಭಿನಯಿಸುತ್ತಿದ್ದರು. ಈಚೆಗೆ ದಾಸಸಾಹಿತ್ಯದಿಂದಲೇ ನೃತ್ಯರೂಪಕವನ್ನು ತಯಾರಿಸಿ ಅಭಿನಯಿಸುತ್ತಾರೆ.

ಸಿನಿಮಾದಲ್ಲೂ ಹಲವಾರುಕಡೆ ದಾಸಸಾಹಿತ್ಯವನ್ನು ಬಳಸುತ್ತಾರೆ, ಹೀಗಾಗಿ ಈಗ ದಾಸಸಾಹಿತ್ಯದ ಸ್ವರೂಪದ ಬಗೆಗೇ ಒಂದು ರೀತಿಯ ಸಂಕೀರ್ಣ ಭಾವನೆಯುಂಟಾಗ ತೊಡಗಿದೆ. ಅಂದರೆ ಇದು ಶಾಸ್ತ್ರೀಯ ಸಂಗೀತವೋ, ಸುಗಮಸಂಗೀತವೋ, ಸಿನಿಮಾ ಸಂಗೀತವೋ ಅಥವಾ ಎಲ್ಲವೂ ಹೌದೋ ಎಂಬುದಾಗಿ.

ದಾಸಸಾಹಿತ್ಯವು ಮೂಲದಲ್ಲಿ ಛಂದೋಬಂಧರೂಪವಾಗಿದ್ದು ತೀರ ಸರಳವಾದ ರಾಗದ ಚೌಕಟ್ಟುಗಳಲ್ಲಿ ರಚಿತವಾಗಿತ್ತು. ಇದು ಸಾಹಿತ್ಯಪ್ರಧಾನವಾದ ಸಂಗೀತ. ರಾಗವಿಲ್ಲದೆ ಓದಿದರೆ ಭಾವ ಸ್ಫುಟವಾಗದ–ಆದರೆ ತೀರ ಹೆಚ್ಚಾಗಿ ರಾಗ ತುಂಬಿಸಿದಾಗ ಭಾವವು ಕಣ್ಮರೆಯಾಗಬಹುದಾದ ಸಾಹಿತ್ಯ ಕೃತಿಯಿದು. ಅಲ್ಲದೆ ಈ ಸಾಹಿತ್ಯ ರಚನೆಯಲ್ಲೂ ಹಲವಾರು ವೈವಿಧ್ಯ ಕಂಡುಬರುತ್ತದೆ. ವಾಗ್ಗೇಯಕಾರರ ಕೃತಿಗಳಿಗೆ ಈ ಹಾಡುಗಳೇ ಮೂಲ, ಇದರಲ್ಲಿ ಮಧ್ಯಮಕಾಲ ಸಾಹಿತ್ಯ, ಮೂರನೇಕಾಲದ ಸಾಹಿತ್ಯಗಳೂ ದೊರೆಯುತ್ತದೆ, ಎಲ್ಲದರಲ್ಲೂ ರಾಗದ ಬಳಕೆ ತೀರ ಸಾಮಾನ್ಯ. ಇದರ ರಚನೆ ಹೇಗಿದೆಯೆಂದರೆ ಇದನ್ನು ಸಂಗತಗಳೊಡನೆ ವಿಸ್ತರಿಸಿದರೆ ವಾಗ್ಗೇಯಕಾರರ ಕೃತಿಗಳಂತೆ ವಿಕಾಸಗೊಳ್ಳುತ್ತವೆ. ರಾಗದ ವಿಕಾಸಕ್ಕೆ ಇಂಬುಗೊಡುವಂತಹ ರಚನೆಗಳಾಗಿವೆ.

ಎಂ. ರಾಜಗೋಪಾಲಾಚಾರ್ಯ

ವಾಗ್ಗೇಯಕಾರರ ರಚನೆಯಲ್ಲಿ–ಒಂದು ರಾಗದ ಕೃತಿಯಲ್ಲಿ–ಆ ರಾಗದ ಹಲವು ಮೈ ಕಾಣುವಂತಹ ಪಲುಕುಗಳಿರುತ್ತವೆ, ವಿವಿಧ ಸಂಗತಿಗಳು ಅಲ್ಲಿ ಹಂತಹಂತವಾಗಿ ಬೆಳೆಯುವುದನ್ನು ಕಾಣಬಹುದು. ದಾಸಸಾಹಿತ್ಯದಲ್ಲಿ–ಒಂದೇ ರಾಗ, ಹಲವಾರು ಪದ್ಯಗಳಲ್ಲಿ ಹಲವಾರು ಬಾನೆಗಳಿರುತ್ತವೆ. ಒಂದೇ ಪದ್ಯದಲ್ಲಿ ರಾಗದ ಹಲವು ಮೈ ಕಾಣಲಾಗದು. ಹಾಗಿದ್ದರೆ ಅದು ಸಾಹಿತ್ಯಕ್ಕೆ ಅದರ ಭಾವಕ್ಕೆ ಧಕ್ಕೆತಗುಲುವ ಸಂಭವವಿದೆ. ಉದಾ:

ರಾಗ ಮೋಹನ–

ರಂಗ ನಾಯಕ ರಾಜೀವ ಲೋಚನ
ರಮಣನೆ ಬೆಳಗಾಯಿ ತೇಳೆನ್ನು ತ ||
(ಪಿರಿಯಕ್ಕರ ಛಂದಸ್ಸು)

* * * *

ನಾರಾಯಣ ನಾರಾಯಣ ನಾರಾಯಣ
ನಾರಾಯಣ
ನಾರಾಯಣ ಲಕ್ಷುಮಿಯರಸನೆ

* * * *

ಮೆಲ್ಲಮೆಲ್ಲನೆಬಂದನೆ| ಗೋಪಮ್ಮ ಕೇಳೆ
ಮೆಲ್ಲಮೆಲ್ಲನೆಬಂದು ಗಲ್ಲಕೆಮುದ್ದು
ಕೊಟ್ಟು
ನಿಲ್ಲದೆ ಓಡಿಹೋದ ಕಳ್ಳಗೆ ಬುದ್ಧಿ ಹೇಳೆ||

* * * *

ಕೊಳಲಿನೂದುವ ಚದುರನ್ಯಾರೇ
ಪೇಳಮ್ಮ | ಪ
ಕೊಳಲಬಲೆಯರ ವ್ಯಾ| ಕುಲ ಮಾಡಿಸಿ-
ಭೂ

(36ನೇ ಪುಟ ನೋಡಿ)

# ಮಣಿಪುರ ಕ್ಷೇತ್ರ ಪರಿಚಯ

ಮಣೂರು ಭೀಮರಥಿಯ ದಂಡೆಯ ಮೇಲಿರುವ, 'ಮಣಿಪುರ' ಎಂದು ಪುರಾಣ ಪ್ರಸಿದ್ಧವಾದ ಜಾಗೃತಸ್ಥಾನವಾಗಿದೆ. ಕಲಬುರಗಿ ಜಿಲ್ಲೆಯ ಅಫಜಲಪೂರ ತಾಲೂಕಿನಲ್ಲಿರುವ ಈ ಊರು ಕನ್ನಡ ನಾಡಿನ ತುದಿಯಂಚಿನಲ್ಲಿರುವ ಪುಣ್ಯಕ್ಷೇತ್ರ. ಮಧ್ವಮತ ಸ್ಥಾಪಕರೆನಿಸಿದ ಶ್ರೀಆನಂದತೀರ್ಥರ ಶಿಷ್ಯರಾದ ಮಾಧವತೀರ್ಥರು ತಪವನ್ನಾಚರಿಸಿ ವೃಂದಾವನಸ್ಥರಾದ ತಾಣವಿದು. ಐದು ನೂರು ವರುಷಗಳ ಹಿಂದೆ ಅತ್ಯಂತ ರಮ್ಯಸ್ಥಳವಾಗಿದ್ದು ಅಂದಿನ ಕಾಲದಲ್ಲಿ ಬಹುದೊಡ್ಡ ವಿದ್ಯಾಕೇಂದ್ರವಾದ ಅಗ್ರಹಾರವೆನಿಸಿತ್ತು.

ಇಲ್ಲಿ ಶೈವ–ವೈಷ್ಣವ, ಕೀಳು–ಮೇಲೆಂಬ ಭೇದ ಭಾವವಿಲ್ಲದೇ ಅಧ್ಯಾತ್ಮ ಪ್ರಪಂಚದಲ್ಲಿ ಸರ್ವ ಧರ್ಮಸಮತಾಭಾವನೆಯೂ, ಸರ್ವಭೂತ ದಯಾಪರತೆಯೂ ಮನೆಮಾಡಿಕೊಂಡಿದ್ದವು. ಇದಕ್ಕೆ ನಿದರ್ಶನವಾಗಿ ಈ ಗ್ರಾಮದಲ್ಲಿ ವೈಷ್ಣವೋಪಾಸನೆಯ ಪ್ರತೀಕವಾಗಿ ·ಚೆನ್ನಕೇಶವ ದೇವಾಲಯವೂ, ಶಿವೋಪಾಸನೆಯ ಪ್ರತೀಕವಾಗಿ ಶಂಕರನ ದೇವಾಲಯವೂ, ಜೈನ ಧರ್ಮದವರ ತೀರ್ಥಂಕರರ ಮಂದಿರವೂ, ಗ್ರಾಮ ಜೀವಿಗಳ ಉಪಾಸನಾ ದೇವತೆಯಾದ ಎಲ್ಲಮ್ಮ ಮುಂತಾದ ದೇವ ಮಂದಿರಗಳೂ ಇವೆ. ಇವುಗಳಲ್ಲದೇ ಯಾದವಾರ್ಯರು ವಾಸಮಾಡುತ್ತಿದ್ದ ಗುಹೆ, ರಾಜಕೀಯ ಕುರುಹುಗಳಾದ ಕೋಟೆ ಕೊತ್ತಲಗಳು ಇಂದಿಗೂ ಕಾಣಲು ಸಿಗುತ್ತವೆ.

ಈ ಅಗ್ರಹಾರಕ್ಕೆ ದೊರೆತ ಈ ಹೆಸರಿನ ಔಚಿತ್ಯವನ್ನು ಕುರಿತು 'ಮಣಿಪುರದ ಮಣಿಮಾಲೆ' ಎಂಬ ಗ್ರಂಥದಲ್ಲಿ ಮಣ್ಣಿನ ಊರು ಮಣ್ಣೂರು ಎಂದು ನಿರೂಪಿಸಿದ್ದಾರೆ. ಆದರೆ 'ವಂಶ ಪ್ರದೀಪ'ದ ಮೂಲ ಲೇಖಕರಾದ ಶ್ರೀರಾಮ ಕೇಶವಾಚಾರ್ಯರು ತಮ್ಮ ಕೃತಿಯಲ್ಲಿ ಇದು ಅನೇಕ ವಿದ್ವನ್ಮಣಿಗಳಿಂದಲೂ ಪರಮೋತ್ತಮನಾದ ದೇವ ಮಣಿಯಂತಿರುವ, ಶ್ರೀನಾಥನೆಂದು ಖ್ಯಾತಿವೆತ್ತ ಚೆನ್ನಕೇಶವನ ಆವಾಸದಿಂದಲೂ, ಭೂಸುರರೆಂದು ಖ್ಯಾತರಾದ ಮಣಿಪುರದ ಮಹಾಮಣಿ ಮುತ್ತುಗಳಂತಿರುವ ದ್ವಿಜೋತ್ತಮರಾದ ತಪಸ್ವಿಗಳಿಂದಲೂ ಕೂಡಿದ ಪುಣ್ಯದೇಶ ಎಂದು ವರ್ಣಿಸಿದ್ದಾರೆ.

ಇಲ್ಲಿ ಮೂರು ಸಾವಿರ ಶ್ರೋತ್ರೀಯ ಬ್ರಾಹ್ಮಣರು ಆಶ್ರಯ ಹೊಂದಿದ್ದು ಮೂರುನೂರು ಯತಿಶ್ರೇಷ್ಠರು ಈ ನೆಲದಲ್ಲಿ ತಪಗೈದು ಸಿದ್ಧಪಡೆದರೆಂದು ಸತ್ಯನಾಥ ವಿಜಯದಿಂದ ತಿಳಿದು ಬರುವುದು. ಈ ಪ್ರದೇಶವು ಮೊದಮೊದಲು ಆದಿಲಶಹ, ಪೇಶ್ವೆಯವರು, ಹಾಗೂ ನಿಜಾಮರ ಆಡಳಿತಕ್ಕೆ ಒಳಪಟ್ಟಿದ್ದು ಈಗ ಕರ್ನಾಟಕದ ಆಡಳಿತಕ್ಕೆ ಸೇರಿದೆ. ಇಲ್ಲಿಗೆ ಹೋಗಬಯಸುವ ಪ್ರವಾಸಿಗರು ಕಲಬುರಗಿಯಿಂದ ಅಫಜಲಪೂರ ಮಾರ್ಗವಾಗಿ ಬಸ್ಸಿನಿಂದ ಹೋಗಬಹುದು, ಹಾಗೂ ಅಕ್ಕಲ ಕೋಟ ರೇಲ್ವೆ ನಿಲ್ದಾಣದಿಂದಲೂ ಬಸ್ಸಿನಿಂದ ಹೋಗಬಹುದು. ಅಲ್ಲದೇ ಇಂಡಿರೋಡ್ ಎಂಬ ರೇಲ್ವೆನಿಲ್ದಾಣದಿಂದ ಚಿಕ್ಕಮಣೂರಿಗೆ ಬಸ್ಸಿನಿಂದ ಬಂದು ನಂತರ ಭೀಮರಥಿಯನ್ನು ದಾಟಿ ಬರಬಹುದು.

ಈ ಗ್ರಾಮದ ಮುಂದೆ ಹರಿಯುವ ಭೀಮರಥಿಯ ನೋಟವು ರಮ್ಯವಾದದ್ದು. ಭೀಮಾಶಂಕರದಿಂದ ಇಳಿದು ಬಂದ ಈ ಪ್ರವಾಹವು ಪಂಢರಪುರ, ಆಗರಖೇಡ ಮುಂತಾದ ಪುಣ್ಯಸ್ಥಳಗಳನ್ನು ದಾಟಿ ಈ ಅಗ್ರಹಾರದ ವೇದ ವಿದ್ಯಾಪ್ರವಾಹವನ್ನು ಕೂಡಿ ಕೊಳ್ಳಲು ಧಾವಿಸಿ ಬರುತ್ತಿರುವಂತೆ ತೋರುವುದು. ಈ ಭೀಮರಥಿಯ ಬಗ್ಗೆ ಪುರಾಣ ಪ್ರಸಿದ್ಧವಾದ ಐತಿಹ್ಯವೊಂದಿದೆ– ಪಾಂಡವರು ಅಜ್ಞಾತವಾಸವನ್ನು ಮುಗಿಸಿ ಹಸ್ತಿನಾವತಿಗೆ ಹೋಗುವಾಗ ಭೀಮಾಶಂಕರಕ್ಕೆ ಬಂದರು. ಅಲ್ಲಿಯೇ ಶ್ರೀಕೃಷ್ಣನ ದರ್ಶನವಾಯಿತು. ಮಹಾರಥಿಯಾದ ಭೀಮನಿಗೆ ಶ್ರೀಕೃಷ್ಣನ ಆಲಿಂಗನದಿಂದ ರೋಮ ರೋಮ ರಂಧ್ರಗಳಿಂದ ಆನಂದವು ಪ್ರವಾಹವಾಗಿ ಪ್ರವಹಿಸಿತು. ಭೀಮೆಗೆ ಕೂಡಿತು, ಅಂದಿನಿಂದ ಭೀಮೆಯು ಭೀಮರಥಿಯಾದಳು. ಇದರ ಒಂದು ಬದಿಗೆ ಉದ್ದಕ್ಕೂ ಹರಡಿದ, ವಿಶಾಲವಾದ ಉನ್ನತವಾದ ಕಟ್ಟೆಯ ಮೇಲೆ ಕಂಗೊಳಿಸುವ ಶ್ರೀಮಾಧವತೀರ್ಥರು, ಶ್ರೀ ವೇದೇಶ ತೀರ್ಥರು ಹಾಗೂ ಶ್ರೀ ತಂಗಳೊಡೆಯರ ವೃಂದಾವನಗಳು ಇವೆ.

ಭೀಮರಥಿಯ ಒಂದು ಪಕ್ಕದಲ್ಲಿ ದಿಬ್ಬದ ಮೇಲ್ಗಡೆ ಬೆಳೆದ ಗ್ರಾಮವು ಚಿಕ್ಕಮಣ್ಣೂರು ಎನಿಸಿದರೆ ಇನ್ನೊಂದು ಪಕ್ಕದಲ್ಲಿ ಬೆಳೆದ ಹಿರೇ ಮಣ್ಣೂರು ಗ್ರಾಮವೇ ಪ್ರಸ್ತುತ ಲೇಖನದ ಮಣ್ಣೂರು ಕ್ಷೇತ್ರ. ಇಲ್ಲಿಯ ವೃಂದಾವನಗಳನ್ನು ದಾಟಿ ತುಸುದೂರ ಒಳಗೆ ಹೋಗುವುದರಲ್ಲಿಯೆ ಪುರಾಣಪ್ರಸಿದ್ಧವಾದ ಚೆನ್ನಕೇಶವನ ಮಂದಿರ.

ಶೇಷಾದ್ರಿಗಳು ಘನವಿದ್ವಾಂಸರು, ಭಗವದ್ಭಕ್ತರು. ಕುಂಭಕೋಣದಲ್ಲಿ ಸರಾಫರಾದ ಇವರ ಅಲ್ಲಿನ ಬರಗಾಲದಿಂದಾಗಿ ತಮ್ಮ ವೃತ್ತಿಯನ್ನು ತೊರೆದು ಕಂಚಿ ತಿರುಪತಿಗಳ ಮೂಲಕ ಕನ್ನಡ ನಾಡಿನ ಮಣಿಪುರಕ್ಕೆ ಪತ್ನೀಸಹಿತ ಬಂದರು. ಇಲ್ಲಿಯ ಪ್ರಶಾಂತವಾತಾವರಣ, ಭಕ್ತರ ಮನೊಭೀಷ್ಟವನ್ನು ಈಡೇರಿಸುವ ಪ್ರಾಣದೇವರು ಹಾಗೂ ಮಾಧವತೀರ್ಥರ ವೃಂದಾವನಗಳ ಮಹಿಮೆಯ ಅವರನ್ನೂ ಅವರ ಹೆಂಡತಿ ಭಾರತೀದೇವಿಯನ್ನೂ ಆಕರ್ಷಿಸಿದವು. ಈ ದಂಪತಿಗಳ ಸಾತ್ತ್ವಿಕ ಜೀವನವು ಮಣಿಪುರದ ಜನರನ್ನು ಆಕರ್ಷಿಸಿ ಅವರನ್ನು ಅಲ್ಲಿಯೇ ಇರಿಸಿಕೊಳ್ಳಲು ಇಚ್ಛಿಸಿದರು. ಹೀಗೆ ದೈವೀಪ್ರೇರಣೆಯೋ ಎಂಬಂತೆ ಎಲ್ಲರ ಮನೋಭೀಷ್ಟವು ಒಂದೇ ಆಗಿ ಶೇಷಾದ್ರಿ ದಂಪತಿಗಳು ಮಣಿಪುರದಲ್ಲಿಯೇ ನೆಲೆಸುವಂತಾಯಿತು.

ಕೆಲವು ದಿನಗಳು ಕಳೆಯುವಲ್ಲಿಯೇ ಉತ್ತರಾದಿ ಮಠದ ಶ್ರೀವಿದ್ಯಾನಿಧಿತೀರ್ಥರು ಅಲ್ಲಿಗೆ ಬಂದರು. ಮಂತ್ರಾಕ್ಷತೆಯನ್ನು ಕೊಡುವ ಸಂದರ್ಭದಲ್ಲಿ ಶೇಷಾದ್ರಿ ದಂಪತಿಗಳನ್ನು ಕಂಡು ಮಂತ್ರಮುಗ್ಧರಾದಂತೆ ಒಂದುಕ್ಷಣ ಕಣ್ಣು ಮುಚ್ಚಿದರು. ನಿಧಾನವಾಗಿ ಕಣ್ತೆರೆಯುತ್ತ 'ಶೇಷಾದ್ರಿಗಳೇ, ನಿಮಗೆ ಲೋಕೋತ್ತರನಾದ ಮಗನು ಜನಿಸುವನು. ಆ ಸುಪುತ್ರನ ಆಗಮನವನ್ನು ನಿಮಗಿಂತ ಹೆಚ್ಚು ನಾವು ನಿರೀಕ್ಷಿಸಬೇಕಾಗಿದೆ' ಎಂದು ನುಡಿದಾಗ ಮೂಕ ವಿಸ್ಮಿತರಾಗಿ ನಿಂತು ಆನಂದಬಾಷ್ಪವನ್ನು ಸುರಿಸಿದರು ಶೇಷಾದ್ರಿಗಳು.

ಒಂದು ವರ್ಷ ಕಳೆಯುವುದರಲ್ಲಿಯೆ ಸುಮಾರು ಕ್ರಿ. ಶ. ೧೪೩೭ ರಲ್ಲಿ ಶ್ರೀ ವಿದ್ಯಾನಿಧಿ ತೀರ್ಥರ ಅನುಗ್ರಹಪೂರ್ಣ ಸೂಚನೆಯಂತೆ ಭಾರತೀದೇವಿ ಸಕಲ ಲಕ್ಷಣ ಸಂಪನ್ನನಾದ ಸುಂದರವಾದ ಗಂಡುಮಗುವಿಗೆ ಜನ್ಮವಿತ್ತರು. ಆ ಮಗುವಿಗೆ ತಮ್ಮ ಕುಲಸ್ವಾಮಿಯಾದ ವರದರಾಜನ ಹೆಸರನ್ನಿಟ್ಟರು. ಕ್ರಮೇಣವಾಗಿ ಬೆಳೆಯುತ್ತ ವರದರಾಜನು ತನ್ನ ಮುದ್ದು ಮುದ್ದಾದ ತೊದಲ್ನುಡಿಗಳಿಂದ, ಆಟಪಾಟಗಳಿಂದ ಸಕಲರನ್ನೂ ಸಂತೋಷಗೊಳಿಸುತ್ತ ತಂದೆ ತಾಯಿಗಳ ಮಾತ್ರವಲ್ಲ, ಊರವರ ಕಣ್ಮಣಿಯಾಗಿ ರಂಜಿಸಿದನು. ಹೀಗೆ ಕೆಲವು ವರ್ಷಗಳು ಕಳೆದವು. ಮುಂದೆ ಈ ವರದರಾಜನ ಉಪನಯನದ ಸಂಬಂಧವಾಗಿ ನಡೆದ ಘಟನೆಯು ಮಣಿಪುರಕ್ಕೆ ವಿಶೇಷ ಮಹತ್ವವನ್ನು ತಂದುಕೊಟ್ಟ ಅಪೂರ್ವಘಟನೆಯಾಗಿದೆ.

**ಶ್ರೀಮತಿ ಸುಮನ ಯಜುರ್ವೇದಿ**

ಒಂದುಸಲ ಶ್ರೀ ವಿದ್ಯಾನಿಧಿ ತೀರ್ಥರು ಅಲ್ಲಿಗೆ ಂದ ಸಂದರ್ಭದಲ್ಲಿ ಅವರು ವರದರಾಜನ ಉಪ ಯನದ ಬಗ್ಗೆ ಪ್ರಶ್ನಿಸಿದಾಗ ಶೇಷಾದ್ರಿಗಳು ಮ್ಮ ಕುಲಸ್ವಾಮಿಯಾದ ಕಂಚಿ ವರದರಾಜನ ನ್ನಿ ದಾನದಲ್ಲಿ ಮಾಡಬೇಕೆಂಬ ಹಂಬಲವನ್ನೂ ದು ಸಾಧ್ಯವಾದೀತೇ ಎಂಬ ಅನುಮಾನವನ್ನೂ ್ಯಕ್ತಪಡಿಸಿದರು. ಆಗ "ನಾಳೆ ಬಂದು ಕಾಣಿರಿ ಮ್ಮ ಸಮಸ್ಯೆ ದೂರಾಗುವದು" ಎಂದು ಶ್ರೀ ಳವರು ಹೇಳಿದಾಗ, ಆ ನಾಳೆಗಾಗಿ ಕುತೂಹಲ ಂದ ಕಾಯ್ದರು. ಆ ರಾತ್ರಿ ದಂಪತಿಗಳಿಬ್ಬರೂ ್ದ್ರೆ ಮಾಡಲಾಗದೇ ಬಹಳ ಹೊತ್ತು ಎಚ್ಚ ್ದು ಬೆಳಗಿನಜಾವದಲ್ಲಿ ಶೇಷಾದ್ರಿಗಳು ಒಂದು ಧದ ಭಾವಸಮಾಧಿಯ ಸ್ಥಿತಿಯಲ್ಲಿ ಅಪೂರ್ವ ್ವಶ್ಯವೊಂದನ್ನು ಕಂಡರು ಅವರ ಆ ಕನಸಿನಲ್ಲಿ ಂಚಿ ವರದನೇ ಬಂದು—'ಗ್ರಾಮದ ಆಗ್ನೇಯ ಾಗದ ದುರ್ಗಾದೇವಿಯ ಪಕ್ಕದಲ್ಲಿಯೇ ನಾನಿ ್ದೇನೆ. ನಾನು ಇಲ್ಲಿಯೇ ಇರಲು ಕಂಚಿಗೆ ಬರುವ ಗ್ಗೆ ಚಿಂತಿಸುವೆಯೇಕೆ' ಎಂದು ಹೇಳಿ ಅದೃಶ್ಯ ಾದನು. ನಸುಕಿನಲ್ಲಿಯೇ ದಂಪತಿಗಳು ಸ್ನಾನ ಮಾಡಿ ಫಲಪುಷ್ಪಗಳೊಂದಿಗೆ ಶ್ರೀಗಳವರಲ್ಲಿಗೆ ರುವಷ್ಟರಲ್ಲಿಯೇ ಅವರೂ ಶೇಷಾದ್ರಿಗಳ ಬರು ವನ್ನೇ ನಿರೀಕ್ಷಿಸುತ್ತಿದ್ದರು. ಅವರಿಗೂ ಅದೇರೀತಿ ಸ್ವಪ್ನದೃಷ್ಟಾಂತವಾಗಿತ್ತು. ಆಶ್ಚರ್ಯಕರವಾದ ಈ ಸ್ವಪ್ನದ ಸಂಗತಿಯು ಹಾ, ಹಾ ಎನ್ನುವಷ್ಟ ರಲ್ಲಿಯೇ ಊರಲ್ಲೆಲ್ಲ ಹಬ್ಬಿ, ಮಣಿಪುರದ ಜನರನ್ನು ದುರ್ಗಾದೇವಿಯ ಗುಡಿಯ ಕಡೆಗೆ ಆಕರ್ಷಿಸಿತು. ಶ್ರೀಗಳವರು, ಶೇಷಾದ್ರಿಗಳು ಹಾಗೂ ಇನ್ನುಳಿದ ಕೆಲವು ಜನ ಆಚಾರ್ಯರೊಂದಿಗೆ ನಿರ್ದೇಶಿತ ಸ್ಥಳಕ್ಕೆ ಬಂದರು. ತೀರ್ಥಪ್ರೋಕ್ಷಣೆಯಿಂದ ಅಗೆಯಬೇಕಾದ ನೆಲವನ್ನು ನಿರ್ದೇಶಿಸಿ ಅಗೆಯಲು ಹೇಳಿದರು. ಒಂದೆರಡು ಅಡಿ ಅಗೆಯುವದರಲ್ಲಿಯೇ ವಿಗ್ರಹದ ಪ್ರಭಾವಳಿಯು ಕಾಣತೊಡಗಿತು. ಕಬ್ಬಿಣದ ಗುದ್ದಲಿಯಿಂದ ಅಗೆದರೆ ಪೆಟ್ಟಾದೀತೆಂದು ಕೈಯಿಂದಲೇ ಮಣ್ಣನ್ನು ಅಗೆದು ತೆಗೆದರು. ಆಗ ನಿಧಾನವಾಗಿ, ಕುತೂಹಲದಿಂದ ನಿರೀಕ್ಷಿಸುತ್ತಿರುವವರ ಕಣ್ಣನ್ನು ತಣಿಸುವಂತೆ ನಯನ ಮನೋಹರನೂ, ಪುಣ್ಯಪ್ರದನೂ ಆದ ಶ್ರೀಮನ್ನಾರಾಯಣನು ಶ್ರೀ ಚೆನ್ನಕೇಶವನ ವಿಗ್ರಹರೂಪದಲ್ಲಿ ಪ್ರತ್ಯಕ್ಷನಾದನು.

ಮನೋಹರವಾದ ಈ ಮೂರ್ತಿಯ ಮುಖಭಾವವು ಸಾತ್ತ್ವಿಕವಾದ ಶಾಂತ ಕಳೆಯಿಂದ ಒಪ್ಪುತ್ತದೆ. ಶಿರದಮೇಲೆ ರತ್ನಖಚಿತ ಕಿರೀಟವೂ, ಆ ಕಿರೀಟ ಮತ್ತು ಮುಖಕ್ಕೆ ಕವಚವೆಂಬಂತೆ ರಮ್ಯವಾದ ಚಕ್ರಾಕಾರದ ಪ್ರಭಾವಲಯವೂ ಇದೆ. ಅದನ್ನು ಶಿರಶ್ಚಕ್ರವೆಂದು ಕರೆಯುವರು. ಇದರ ಸುತ್ತಲೂ ಇನ್ನೊಂದು ಬಹಿರ್ವಲಯವಿದೆ. ಕರ್ಣಕುಂಡಲಗಳು, ಕೌಸ್ತುಭರತ್ನಖಚಿತ ಹಾರಗಳು, ಮುಂಗೈ ಮತ್ತು ಪಾದಗಳಲ್ಲಿ ತೋರುವ ಕಡಗಗಳು, ಹೂವಿನ ಎಸಳಿನಂತಹ ಕೋಮಲ ಬೆರಳುಗಳು, ಹಾಗೂ ಕಟಿಯ ಸುತ್ತಲೂ ಒಪ್ಪುವ ಅಲಂಕಾರಗಳಿಂದಲೂ ವಿಗ್ರಹವು ಮನೋಹರವಾಗಿದೆ. ಕೇಶವನ ನಾಲ್ಕು ಕೈಗಳಪೈಕಿ ಹಿಂದಿನ ಬಲ ಮತ್ತು ಎಡ ಕೈಗಳಲ್ಲಿ ಶಂಖ ಮತ್ತು ಚಕ್ರ ಹಾಗೂ ಮುಂದಿನ ಎಡ ಮತ್ತು ಬಲಗೈಗಳಲ್ಲಿ ಗದಾ ಮತ್ತು ಪದ್ಮಗಳು ಸೂಕ್ಷ್ಮಕುಶಲತೆಯಿಂದ ಆಕರ್ಷಿಸುತ್ತವೆ. ಸಾಮಾನ್ಯವಾಗಿ ಶ್ರೀವಿಷ್ಣುವಿನ ಬಲಗೈಯಲ್ಲಿ ಚಕ್ರ ಮತ್ತು ಎಡಗೈಯಲ್ಲಿ ಶಂಖಗಳು ಇರುತ್ತಿದ್ದರೆ ಆತನ ರೂಪಗಳಲ್ಲಿ ಬಂದಾದ ಈ ಕೇಶವನ ಬಲಗೈಯ್ಯಲ್ಲಿ ಶಂಖ ಹಾಗೂ ಎಡಗೈಯ್ಯಲ್ಲಿ ಚಕ್ರವಿರುವುದು ಒಂದು ವೈಶಿಷ್ಟ್ಯವಾಗಿದೆ. ಮೂರ್ತಿಯ ಬಲಗಡೆಗೆ ಗರುಡ, ಚಾಮರಧಾರಿ ಹಾಗೂ ಇನ್ನೊಬ್ಬ ಸ್ತ್ರೀಯರ ವಿಗ್ರಹಗಳು ಇವೆ, ಎಡಗಡೆಗೆ ನಮ್ರವಾಗಿ ಕೈಮುಗಿದು ನಿಂತ ಪುರುಷ ಮತ್ತು ಒಬ್ಬ ಸ್ತ್ರೀಯ ವಿಗ್ರಹಗಳೂ, ಒಂದು ಸ್ತ್ರೀಯ ಅಸ್ಪಷ್ಟ ಆಕೃತಿಯೂ ಇವೆ.

ಹೀಗೆ ಹಿರೇಮಣ್ಣೂರಿನ ಕೇಶವನ ಈ ವಿಗ್ರಹವು ತನ್ನದೇ ಆದ ವೈಶಿಷ್ಟ್ಯಗಳಿಂದ ಕೂಡಿದ್ದು ಚಿತ್ತಾಕರ್ಷವೂ, ನಯನ ಮನೋಹರವೂ ಆದ ಅಪೂರ್ವ ಶಿಲ್ಪಕೃತಿಯಾಗಿದೆ. ಶೇಷಾದ್ರಿಗಳು ತಮಗೆ ದೊರೆತ ಈ ವಿಗ್ರಹವನ್ನು ತಮ್ಮ ಮನೆಯಲ್ಲಿಯೇ ಪ್ರತಿಷ್ಠಾಪಿಸಿ ಪೂಜಿಸಿದರು. ಮುಂದೆ ಅವರ ಮಕ್ಕಳಾದ ವರದರಾಜಾಚಾರ್ಯರ (ಇವರ ಮುಂಜಿವೆಯ ಸಂದರ್ಭದಲ್ಲಿಯೇ ಶ್ರೀ ಚೆನ್ನಕೇಶವನು ದೊರೆತದ್ದು) ಕಿರಿಯ ಮಗ ರಾಮಕೇಶವಾಚಾರ್ಯರು ಆ ಮನೆಯನ್ನೇ ಒಂದು ದೇವಾಲಯವನ್ನಾಗಿ ಪರಿವರ್ತಿಸಿದರು. ಇತ್ತೀಚೆಗೆ ದೇವಾಲಯವು ತುಂಬ ಜರ್ಜರಿತವಾದಾಗ ಆದ್ಯವಂಶಸ್ಥರೂ, ಅಭಿಮಾನಿಗಳೂ ಕೂಡಿ ಅವಧಾನಿ ಹುಚ್ಚಾಚಾರ್ಯರ ಹಿರಿತನದಲ್ಲಿ ಅದರ ಜೀರ್ಣೋದ್ಧಾರದ ಕಾರ್ಯವನ್ನು ಕೈಗೆತ್ತಿಕೊಂಡು ದಕ್ಷತೆಯಿಂದ ನಿರ್ವಹಿಸಿದ್ದಾರೆ. ಕಾಲದ ಒತ್ತಡಕ್ಕೆ ಸಿಕ್ಕು ಭೂಮಿಯಲ್ಲಿ ಅಡಗಿದ್ದ ಧ್ರುವಕರಾರ್ಚಿತ ಚೆನ್ನಕೇಶವನು ಇಂದು ಸುವರ್ಣ ಕಲಶಾಂಕಿತವಾದ, ವಿದ್ಯುದ್ದೀಪಗಳ ಪ್ರಕಾಶದಿಂದ ಕಂಗೊಳಿಸುವ, ನೂತನ ಕಟ್ಟಡದ ದೇವಮಂದಿರದಲ್ಲಿ ವಿರಾಜಿಸುತ್ತಿದ್ದಾನೆ, ಇಲ್ಲಿ ಪ್ರತಿವರ್ಷವೂ ಮಾರ್ಗಶಿರ ಶುದ್ಧ ಹುಣ್ಣಿಮೆಯಂದು ಶ್ರೀ ಚೆನ್ನಕೇಶವನ ವರ್ಧಂತ್ಯುತ್ಸವ (ಕೇಶವ ಜಯಂತಿ) ವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಕೆಲವು ವರ್ಷಗಳಿಂದ ಕಾರ್ತೀಕ ಶುದ್ಧ ಪಂಚಮಿ, ಷಷ್ಠಿ ಮತ್ತು ಸಪ್ತಮಿಗಳಂದು ವೇದೇಶ ತೀರ್ಥರ ಆರಾಧನೆಯನ್ನು ಆಚರಿಸುತ್ತಿದ್ದಾರೆ.

ಊರಿನ ಪೂರ್ವಭಾಗದಲ್ಲಿ, ಶ್ರೀ ಕೇಶವನ ವಿಗ್ರಹವು ದೊರೆತ ಸ್ಥಳದ ಪಕ್ಕದಲ್ಲಿರುವುದೇ ದುರ್ಗಾದೇವಾಲಯ. ಇಂದು ಕೇವಲ ಪ್ರಾಚೀನ ಅವಶೇಷಗಳಾಗಿ ಉಳಿದಿರುವ ಗಚ್ಚಿನಗೋಡೆಗಳು ಅಂದು ಅದೊಂದು ಭವ್ಯವಾದ ದೇವಾಲಯವಾಗಿತ್ತು ಎನ್ನುವುದಕ್ಕೆ ನಿದರ್ಶನಗಳಾಗಿವೆ.

ಈ ದೇವಾಲಯಗಳಲ್ಲದೇ ಊರಲ್ಲಿ ಇನ್ನು ಒಂದು ಎಲ್ಲಮ್ಮನಗುಡಿ ಇದೆ. ಮೊದಲು ಇದೇ ಕೇಶವನ ದೇವಾಲಯವಾಗಿದ್ದಿರಬಹುದೆಂಬುದು ಅನೇಕ ಸಂಶೋಧಕರ ಅಭಿಪ್ರಾಯವಾಗಿದೆ. ಇಲ್ಲಿ ಕಾಣಬರುವ ವಿಷ್ಣುದೇವಾಲಯದ ಕುರುಹುಗಳು ಗುಡಿಯ ಒಳ–ಹೊರಭಾಗಗಳಲ್ಲಿ ಕೆತ್ತಿರುವ ಶಿಲ್ಪಕಲಾಕೃತಿಗಳೂ, ಶಿಲಾಬಾಲಿಕೆಯರ ವಿಗ್ರಹಗಳೂ ಇದಕ್ಕೆ ಆಧಾರವಾಗಿವೆ. ಗೋಡೆಗಳ ಮೇಲೆ ನಿರ್ಮಿಸಿರುವ ಶ್ರೀವಿಷ್ಣುವಿನ ಅವತಾರಗಳು, ಶ್ರೀಕೃಷ್ಣನ ಬಾಲಲೀಲೆಗಳು, ಮನಮೋಹಕವಾಗಿವೆ. ಶಿಲಾಬಾಲಿಕೆಯರ ವಿಗ್ರಹಗಳಂತೂ ಬೇಲೂರಿನ ಶಿಲಾಬಾಲಿಕೆಯರನ್ನು ಸರಿಗಟ್ಟುವಂತಿವೆ. ಇಲ್ಲಿಯ ಶಿಲ್ಪಕಲೆಗೂ, ಬೇಲೂರಿನ ಶಿಲ್ಪಕಲೆಗೂ ಹೆಚ್ಚಿನ ಸಾಮ್ಯ ಇದೆ. ಇವುಗಳಲ್ಲದೇ ಶಂಖ ಚಕ್ರಧಾರಿಗಳಾದ ಅನೇಕ ವಿಷ್ಣುಮೂರ್ತಿಗಳೂ, ಬಾಗಿಲಿನ ಹಣೆಪಟ್ಟಿಯಮೇಲೆ ಶ್ರೀನರಸಿಂಹನ ಮೂರ್ತಿಯ ವಿಗ್ರಹದ ಒಳಗಡೆ ಒಂದು ಶಿಲಾಲೇಖವೂ ಇವೆ ಪೀಠವು ದೊಡ್ಡದಾಗಿದ್ದರೂ, ಈಗಿರುವ ಎಲ್ಲಮ್ಮನ ಮೂರ್ತಿಯು ಪಂಚಲೋಹದಿಂದ ನಿರ್ಮಿತವಾದ ಚಿಕ್ಕ ಶಿಲಾಪ್ರತಿಮೆಯಾಗಿದೆ. ಮೊದಲು ಇಲ್ಲಿಯೇ ಕೇಶವನಮೂರ್ತಿಯು ಇದ್ದು ಯವನರ ಹಾವಳಿಯ ಕಾಲದಲ್ಲಿ ಆ ಮೂರ್ತಿಯನ್ನು ನದಿಯಲ್ಲಿ ಸುರಕ್ಷಿತವಾಗಿ ಬಚ್ಚಿಟ್ಟಿರಬೇಕು. ಅನಂತರ ಕೆಲಕಾಲದ ಮೇಲೆ ಬರಿದಾದ ಆ ಗುಡಿಯಲ್ಲಿ ಊರಜನರು ಎಲ್ಲಮ್ಮನ ವಿಗ್ರಹವನ್ನು ಸ್ಥಾಪಿಸಿರಬೇಕು ಎಂದು ತಜ್ಞರ ಅಭಿಪ್ರಾಯವಾಗಿದೆ.

ಈ ಊರಿನ ಇನ್ನೊಂದು ಮಹತ್ವದ ಸ್ಥಳವೆಂದರೆ ಗುರುಗಳ ಕಟ್ಟೆ–ಹಾಗೆಂದು ಕರೆಯುವುದೇ ರೂಢಿಯಾಗಿದೆ. ನದಿಯ ವಿಸ್ತಾರವಾದ ಪಾತ್ರವನ್ನು ದಾಟಿ ಹೋದೊಡನೆಯೇ ಉನ್ನತವೂ ವಿಶಾಲವೂ ಆದ ಕಟ್ಟೆಯ ಮೇಲೆ ಶ್ರೀ ಮಾಧವ ತೀರ್ಥರು, ಶ್ರೀ ವೇದೇಶ ತೀರ್ಥರು, ಹಾಗೂ ಶ್ರೀ ತಂಗಳೊಡೆಯರ ವೃಂದಾವನಗಳು ಕಂಗೊಳಿಸುವವು. ಶ್ರೀಮಾಧವ ತೀರ್ಥರಂತೂ ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾಗಿದ್ದವರು.

ಈ ಊರಿನ ಚಿನಿವಾರರಾದ ಭಾಗಪ್ಪನವರಿಗೆ ಮೂವರು ಮಕ್ಕಳು – ರಾಮಪ್ಪ, ಯಾದಪ್ಪ, ಹಾಗೂ ರಾಘವಪ್ಪ. ಮಹಾಜ್ಞಾನಿಗಳಾದ

ಯಾದಪ್ಪ ಅರ್ಥಾತ್ ಯಾದವಾರ್ಯರು ಕಾಶಿಗೆ ಹೋಗಿ ವಿದ್ಯಾಭ್ಯಾಸ ಮಾಡಿದವರು. ಅವರು ಹಿಂದಿರುಗಿ ಬರುವುದರೊಳಗಾಗಿಯೇ ಅವರ ಅಣ್ಣಂದಿರಾದ ರಾಮಪ್ಪನವರು ಉತ್ತರಾದಿ ಮಠದ ಶ್ರೀ ವೇದೇಶತೀರ್ಥರಾಗಿ ಸನ್ಯಾಸವನ್ನು ಸ್ವೀಕರಿಸಿದ್ದರು. ಆದರೆ ಅನಂತರ ತಮ್ಮ ತಮ್ಮನ ಸಾಮರ್ಥ್ಯವನ್ನು ಗುರುತಿಸಿದ ಇವರು "ಅನುಜೋದಯ ಮಾಶಾಸೆ ನಾಶಾಸೆ ರಾಮಪೂಜನಃ" ಎಂದು ಮಠಾಧಿಪತ್ಯದ ಪೀಠವನ್ನೂ ಬಿಟ್ಟುಕೊಟ್ಟು ಶ್ರೀ ರಾಮಪೂಜೆಗಿಂತ ತತ್ತ್ವಗ್ರಂಥಗಳಲ್ಲಿ ಪಾರಂಗತನಾಗುವಂತಹ ತಮ್ಮ ತಮ್ಮನಿಗೆ ಪಾಠಹೇಳಿಕೊಟ್ಟು ಜ್ಞಾನಾನಂದನ ಪೂಜೆಯನ್ನು ಮಾಡುವುದಾಗಿ ಹೇಳಿದರು. ಆ ಪ್ರಕಾರವಾಗಿ ನಡೆದುಕೊಂಡ ಮಹಾತ್ಯಾಗಿಗಳಾದರು.

ಮೂರನೆಯವರಾದ ತಂಗಳೊಡೆಯರ (ಶ್ರೀ ಗೋವಿಂದಭಿಕ್ಷುಗಳು) ಬಗ್ಗೆ ವಿಶೇಷವೇನೂ ತಿಳಿದಿಲ್ಲ. ಇವರು ಪೂರ್ವಾಶ್ರಮದಲ್ಲಿ ಯಾರು? ಇಲ್ಲಿಗೆ ಎಂದು, ಏಕೆ ಬಂದರೆಂಬುದೂ ಯಾರಿಗೂ ತಿಳಿದಿಲ್ಲ. ಹೆಚ್ಚಾಗಿ ಜನ ಸಂಪರ್ಕವನ್ನೇ ಇಟ್ಟುಕೊಂಡಿರದ ಇವರು ಏಕಾಂತ ತಪಸ್ವಿಗಳಾಗಿದ್ದರು. ಇವರ ಒಂದು ವೈಶಿಷ್ಟ್ಯವೆಂದರೆ – ದಿನವೂ ಮಧ್ಯಾಹ್ನ ಮಧುಕರಿಯಿಂದ ಬೇಡಿತಂದ ಆಹಾರದ ಜೋಳಿಗೆಯನ್ನು ಗೂಟಕ್ಕೆ ತೂಗುಹಾಕುತ್ತಿದ್ದರು. ಸಂಜೆಗೆ ತಮ್ಮ ಧ್ಯಾನ ಚಿಂತನೆಗಳನ್ನು ಮುಗಿಸಿದ ನಂತರ ಆ ಜೋಳಿಗೆಯನ್ನು ಭೀಮಾನದಿಯಲ್ಲಿ ಅದ್ದುತ್ತಿದ್ದರು. ಆಗ ಅದೇ ಸಿದ್ಧಪಡಿಸಿದ ಆಹಾರದಂತೆ ಅದರಿಂದ ಉಗಿಯು ಹೊರಡುತ್ತಿತ್ತಂ
ಅದನ್ನೇ ದೇವರಿಗೆ ಸಮರ್ಪಿಸಿ ತಾವು ಊ
ಮಾಡುತ್ತಿದ್ದರು. ಇದರಿಂದಲೇ ಅವರಿಗೆ ತಂಗಳೆ
ಡೆಯರು ಎಂಬ ಹೆಸರು ಬಂದಿರುವುದು, ಇ
ಇದರ ಬಗ್ಗೆ ಪ್ರಸಿದ್ಧ ಇತಿಹಾಸ ಲೇಖಕರಾ
ಡಾ॥ ಪಾಂಡುರಂಗರಾವ ದೇಸಾಯಿಯವ
'ತೆಂಗಲೆ ಹಾಗೂ ವಡಗಲೆ' ಎಂಬ ಪಂ
ಗಳು ದಕ್ಷಿಣ ಭಾರತದ ಶ್ರೀ ವೈಷ್ಣವ ಸಂಪ್ರ
ಯದಲ್ಲಿದ್ದುದು ತಿಳಿದುಬರುವುದು ಅಲ್ಲದೇ '
ಯರು' ಎಂಬ ಪದವನ್ನು ಸನ್ಯಾಸಿಗಳಿಗೆ ಗ
ವಾರ್ಥವಾಗಿ ಸಂಬೋಧಿಸುವುದು ರೂಢಿಯ
ಈ ಎಲ್ಲ ಕಾರಣಗಳಿಂದ ತಂಗಳೇ ವಡೆಯ
ಎಂಬ ಪದವು ಮುಂದಿ ತಂಗಳೊಡೆಯರ
ರೂಢಿಯಲ್ಲಿ ಬಂದಿರಬಹುದು, ಎಂದು ಅಭಿಪ್ರಾ
ಪಡುತ್ತಾರೆ.

ಈ ಗುರುತ್ರಯರ ಹಿಂಭಾಗದಲ್ಲಿಯೇ, ಅ
ಮನೆತನದವರು ಇಂದಿಗೂ ಗೌರವದಿಂದ ಆರ
ಸುತ್ತಿರುವ ಶ್ರೀಕೃಷ್ಣ ದ್ವೈಪಾಯನರಿಂದ
ಷ್ಠಾಪಿಸಲ್ಪಟ್ಟ ಆಂಜನೇಯನ ಮಂದಿರ
ಇಲ್ಲಿಂದ ಸ್ವಲ್ಪದೂರದಲ್ಲಿ ಕೃಷ್ಣ ದ್ವೈಪಾಯ
ವಾಸವಾಗಿದ್ದ ಮನೆಯಿದ್ದು ಇಂದು ಅದ
ಮೂರು ಭಾಗವಾಗಿ ಆ ಮನೆತನದ ಮೂ
ಅರ್ಚಕರು ವಾಸಿಸುತ್ತಿದ್ದಾರೆ. ಈ ಮನೆ
ಹಿಂಭಾಗದಲ್ಲಿ ಪೂರ್ವಾಭಿಮುಖವಾಗಿದ್ದ
ಯೊಂದಿದ್ದು, ಅಲ್ಲಿ ಇತ್ತೀಚೆಗೆ ಮುದ್ದಾದ ವ
ಟೇಶನ (ವರದರಾಜನ) ವಿಗ್ರಹವು ದೊರೆ
ಅದನ್ನು ಆದ್ಯಸೇತುರಾಮಾಚಾರ್ಯರು
ಗುಹೆಯಲ್ಲಿಯೇ ಪ್ರತಿಷ್ಠಾಪಿಸಿದ್ದಾರೆ. ಈ ಮನೆ
ಮುಂಭಾಗದಲ್ಲಿಯೇ ಆದ್ಯರ ಕುಲದೇವತ
ಮೇಲೆ ವರ್ಣಿಸಿದ ಶ್ರೀ ಚೆನ್ನಕೇಶವನ ದೇ
ಲಯವಿದೆ.

ಹೀಗೆ ಹೆಚ್ಚು ಪ್ರಸಿದ್ಧಿಯನ್ನು ಪಡೆಯದಿದ್ದ
ಲಲಿತ ಮಂಜುಳವಾಗಿ ಬಳುಕುತ್ತ ಕಣ್ಮನಗ
ತಣಿಸುವ ಭೀಮೆಯ ತೀರದಲ್ಲಿ ಶ್ರೀ ಚೆನ್ನಕೇ
ವಿಪುಲಾಂತಃಕರಣ ಹಾಗೂ ಗುರುತ್ರಯರ
ರಕ್ಷೆಯ ನಡುವೆ,ಪವಿತ್ರಕ್ಷೇತ್ರವಾಗಿಯೂ, ಪೂ
ಸಂಸ್ಕೃತಿಯ ಚೆಲುವಿಗೆ ಅಪೂರ್ವನಾಗರಿಕ
ಬೆಡಗನ್ನೂ ಪಡೆದುಕೊಂಡು, ಶಾಂತಿ ಸಮಾ
ವೀಯುವ ಪ್ರಕೃತಿಯ ನಿಲುವಾಗಿಯೂ ಇ
ಮಣಿಪುರವು ಹಿರೇ ಮಣೂರಾಗಿ ಅಲ್ಲಿಯ ಮ
ಮಕ್ಕಳಿಗೆ ತುಂಬುಜೀವನವನ್ನು ಕರುಣಿಸಿದ
ಧಾಮವಾಯಿಯೂ ಆಗಿ ಕಂಗೊಳಿಸುತ್ತಿದೆ.

( 33ನೇ ಪುಟದಿಂದ )

ವಲಯವೆಲ್ಲವನು| ತಲೆದೂಗಿಸುತಿದೆ ‖ಅ.ಪ‖

ಬೃಂದಾವನದಿ ನಿಂದಿಹ| ನಂತೆ,
ವೈಯಾರದಿ ಕಾಂತೆ
ಕಂದರ್ಪಕೋಟಿ ಸುಂದರ| ನಂತೆ,
ಕುಂದಿಲ್ಲವಂತೆ |
ಅಂದಾದರತಿಯು ಬಲುಸೊಗ | ಸಂತೆ,
ಅದು ಹಿಂದೆ ಚಿಂತೆ |
ನಿಂದಿರಲಾರೆನು ಮಂದಿರದೊಳು ನಾ |
ನಿಂದು ಬಂಧುಗಳು ನಿಂದಿಸಿದರು ಸರಿ॥
ಎಷ್ಟೆಂತ ಪೇಳಲಿವನ| ಜ್ಞರಿಯ,
ಅದ್ಭುತ ಚರಿಯ|
ಕೊಟ್ಟೆಭಾಷೆಗೆ ತಪ್ಪ| ಲರಿಯ,
ಕುಂದೆಳಸಲರಿಯ|
ಇಷ್ಟಭಕ್ತರ ಹಿಮ್ಮೆಗು| ಮರೆಯ,
ಯದುಕುಲವರಿಯ|
ಇಷ್ಟಲ್ಲದೆ ಮನಸಿಟ್ಟೆನ! ಕಳವಳ|
ಬಿಟ್ಟುಪೋಪೆ ಜಯ ವಿಠಲನಲ್ಲಿಗೆ॥
(ಶ್ರೀನಿವಾಸದಾಸರು)

ಈ ಪದ್ಯಗಳ ರಚನೆಗಳೂ ಭಿನ್ನ ಭಿನ್ನವಾಗಿರುವುದಲ್ಲದೆ ರಚನೆಗೆ ತಕ್ಕಂತೆ ಒಂದೇ ರಾಗವು (ಮೋಹನ) ವಿವಿಧ ಪಲುಕುಗಳಲ್ಲಿ ಇಲ್ಲಿ ಕಾಣಿಸಿಕೊಳ್ಳುತ್ತದೆ. ಮೊದಲನೆಯದು ಪಿರಿಯಕ್ಕರ ಛಂದಸ್ಸಿನಲ್ಲಿದೆ. 1.2 ರಲ್ಲಿ ಬೆಳಗಿನ ಜಾವದ ಛಾಯೆಯನ್ನು ಮೂಡಿಸುವ ಧಾಟಿಯಿದೆ. 3 ರ ಬೆಳಗಿನ ಜಾವದ ಧಾಟಿಯಿಲ್ಲ; ಆದರೆ ದೂರು ಹೇಳುವ ಧ್ವನಿಯಿದೆ. 4 ರಲ್ಲಿ ಚಿಂತೆ, ಕಳವಳ, ಮುಂತಾದುವುಗಳಿಗೆ ತಕ್ಕಂತೆ ರಾಗದ ಪಲುಕುಗಳ ಸಂಯೋಜನೆಯಿದೆ. ಹೀಗೆ ಇನ್ನೂ ಕೆಲವು ಪದಗಳಲ್ಲಿರುವ ರಾಗವು ಒಂದೇ ಆದರೂ ಆ ರಾಗದ ವಿವಿಧ ಮುಖಗಳನ್ನು ಕಾಣಬಹುದು. ದಾಸಸಾಹಿತ್ಯದ ಹತ್ತಾರು ಪದ್ಯಗಳನ್ನು ಒಂದೇ ರಾಗದಲ್ಲಿ ನೋಡಿದಾಗ ಇದು ಯಾರಿಗೂ ಮನದಟ್ಟಾಗಬಹುದು.

(ವಾದಿರಾಜ ಕನಕದಾಸ ಆರಾಧನೆಯ ವಿಚಾರ ಗೋಷ್ಠಿಯಲ್ಲಿ ಮಂಡಿಸಲಾದ ಪ್ರಬಂಧದ ತಿರುಳು).

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

—ತಿ. ತಿ. ದೇ॥

## ಪುರಂದರದಾಸರ
## ೫೦೦ ನೇ ಹುಟ್ಟುಹಬ್ಬ




ಜನವರಿಯಲ್ಲಿ ಎರಡು ದಿನ ಪುರಂದರ ದಾಸರ 500 ನೇ ಹುಟ್ಟು ಹಬ್ಬವನ್ನು ಕರ್ನಾಟಕ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ವತಿಯಿಂದ ಅತ್ಯಂತ ಚೇತೋಹಾರಿಯಾಗಿ ಆಚರಿಸಲಾಯಿತು.

ಉತ್ಸವವನ್ನು ಉದ್ಘಾಟಿಸಿದ ಸಂತ ಶ್ರೀ ಟಿ.ಕೆ. ವೇಣುಗೋಪಾಲದಾಸರು ಪುರಂದರದಾಸರು ತಮ್ಮ ತತ್ತ್ವಪದಗಳ ಮೂಲಕ ಆತ್ಮಕ್ಕೆ ಕನ್ನಡಿ ಹಿಡಿದಿದ್ದಾರೆ ಎಂದು ಕೊಂಡಾಡಿದರೆ ಸಂತ ಭದ್ರಗಿರಿ ಶ್ರೀ ಕೇಶವದಾಸರು ದಾಸಸಾಹಿತ್ಯದಲ್ಲಿ ವಿಶ್ವಶಾಂತಿಯನ್ನು ಹಾಗೂ ಅನಂತರ ರಾಷ್ಟ್ರೀಯ ಸಮಗ್ರತೆಯನ್ನು ಗಟ್ಟಿಗೊಳಿಸುವ ಮೌಲ್ಯಗಳಿವೆ ಎಂದು ವಿವರಿಸಿದರು.

ಪುರಂದರ ಸಾಹಿತ್ಯದರ್ಶನ ವಿಚಾರಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದ ಪ್ರೊ॥ ದೇ. ಜವರೇಗೌಡರು ನಿರಕ್ಷರಸ್ಥರಿಗೂ ಪ್ರಿಯವಾಗುವಂತೆ ಬರೆದ ದಾಸರು ಹಾಗೂ ವಚನಕಾರರ ಕಾಳಜಿ ಲೌಕಿಕ ಹಾಗೂ ಪಾರಮಾರ್ಥಿಕಗಳನ್ನು ಮೇಳವಿಸುವತ್ತ ಶ್ರಮಿಸುವುದೇ ಆಗಿದ್ದಿತೆಂದರು. ವಿಚಾರ ಗೋಷ್ಠಿಯಲ್ಲಿ 'ಪರಂಪರೆ'ಯ ಬಗ್ಗೆ ಡಾ॥ ಜಿ. ವರದರಾಜರಾವ್ ಹಾಗೂ ಸಾಹಿತ್ಯದ ಬಗ್ಗೆ ಪ್ರೊ॥ ಜಿ. ವೆಂಕಟಸುಬ್ಬಯ್ಯ ಮಾತನಾಡಿದರು. ಪ್ರೊ॥ ಎಸ್. ಕೆ. ರಾಮಚಂದ್ರರಾಯರು ಕನಕದಾಸರು ಹಾಗೂ ಪುರಂದರದಾಸರ ವಾಙ್ಮಯ ಕೌಶಲವನ್ನು ಕುರಿತು ಮಾತನಾಡಿದರು.

5 ರಂದು ಮಧ್ಯಾಹ್ನ ಡಾ॥ ಸಿದ್ಧಯ್ಯ ಪುರಾಣಿಕ ಅವರ ಅಧ್ಯಕ್ಷತೆಯಲ್ಲಿ 'ಪುರಂದರ ಸಂಗೀತ ದರ್ಶನ' ಪ್ರಾತ್ಯಕ್ಷಿಕ ಉಪನ್ಯಾಸ ಗೋಷ್ಠಿ ನಡೆಯಿತು.

ದಾಸರ ಐದುನೂರನೇ ಹುಟ್ಟುಹಬ್ಬದ ನೆನಪಿನಲ್ಲಿ ಪ್ರೊ॥ ಎಸ್. ಕೆ. ರಾಮಚಂದ್ರರಾವ್ ಅವರು ಸಂಪಾದಿಸಿದ 'ಪುರಂದರ ಸಾಹಿತ್ಯದರ್ಶನ'ದ ನಾಲ್ಕು ಸಂಪುಟಗಳನ್ನು ಡಾ॥ ವಿ. ಕೃ. ಗೋಕಾಕರು ಬಿಡುಗಡೆ ಮಾಡಿದರು (1750 ಪುಟಗಳ ನಾಲ್ಕು ಸಂಪುಟಗಳ ಒಟ್ಟು ಬೆಲೆ 65 ರೂಗಳು ಮಾತ್ರ.) ಈ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ವೀಣೆ ದೊರೆಸ್ವಾಮಿ ಅಯ್ಯಂಗಾರರು ಪುರಂದರದಾಸರ ಹಾಡುಗಳ ಕ್ಯಾಸೆಟ್‌ಗಳನ್ನು ಹೊರತರಬೇಕೆಂದು ಕರೆನೀಡಿದರು. ಪಿತೃಋಣ ಋಷಿಋಣಗಳ ಸಲ್ಲಿಕೆಯ ಕಾರ್ಯದಲ್ಲಿ ತಮಗೆ ಅವಕಾಶ ದೊರಕಿದೆಯೆಂದು ತಿಳಿಸುತ್ತ ಪ್ರೊ॥ ರಾಮಚಂದ್ರರಾಯರು ದಾಸರ ಕೃತಿಗಳೆಂದು 1600 ಪದಗಳಿದ್ದರೂ 'ಪುರಂದರ ಸಾಹಿತ್ಯ ದರ್ಶನ'ದಲ್ಲಿ ದಾಸರವೇ ಎನ್ನಬಹುದಾದ 800 ಕ್ಕೂ ಸ್ವಲ್ಪ ಹೆಚ್ಚಿನ ಕೃತಿಗಳನ್ನು ಮಾತ್ರವೇ ವಿಮರ್ಶೆ ವಿಶ್ಲೇಷಣೆಗೆ ಆಯ್ದುಕೊಳ್ಳಲಾಗಿದೆಯೆಂದು ವಿವರಿಸಿದರು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹ ನಿರ್ದೇಶಕ ಶ್ರೀ ಕೆ. ಸಿ. ಶಿವಪ್ಪ ಸ್ವಾಗತಿಸಿದ ಸಭೆಯನ್ನು ನಿರ್ದೇಶಕ ಶ್ರೀ ಚಂದ್ರಹಾಸಗುಪ್ತ ವಂದಿಸಿದರು. ರಾಜ್ಯಸರ್ಕಾರದ ಕಾರ್ಯದರ್ಶಿ ಶ್ರೀ ಚಿರಂಜೀವಿಸಿಂಗರು ಪುರಂದರ ಕೃತಿಗಳ ಕ್ಯಾಸೆಟ್‌ಗಳನ್ನು ಹೊರತರಲೂ, ದಾಸರ ಆರಿಸಿದ ಕೃತಿಶತಕಗಳ ಸ್ವರಪ್ರಸ್ತಾರ ಸಹಿತ ಪುಸ್ತಕಗಳ ಪ್ರಕಟನೆಯಲ್ಲೂ ಪ್ರಯತ್ನಿಸುವುದಾಗಿ ನುಡಿದರು.

6 ರಂದು ಸಂಜೆ ಪುರಂದರ ಗೀತಾಂಜಲಿ ಕಾರ್ಯಕ್ರಮದಲ್ಲಿ, ಶ್ರೀಮತಿ ರತ್ನಮಾಲಾ ಪ್ರಕಾಶರಿಂದ ಪುರಂದರ ಪದಗಳ ಸಂಗೀತ ಸಭೆಯೂ, ಡಾ॥ ಎಂ. ಬಾಲಮುರಳೀಕೃಷ್ಣ ಅವರಿಂದ ಪುರಂದರನಮನ ಕಾರ್ಯಕ್ರಮವೂ, ಸಂತ ಶ್ರೀ ಭದ್ರಗಿರಿ ಅಚ್ಯುತದಾಸರಿಂದ ಕಥಾ ಕೀರ್ತನವೂ ನಡೆದು ಹೆಚ್ಚು ಜನವನ್ನು ಆಕರ್ಷಿಸಿದವು.

ಕೃಪೆ – ಪ್ರಜಾವಾಣಿ

## ಏಕಾತ್ಮತಾ ಮಾಸಾಚರಣೆ

ಮುಳಬಾಗಿಲಿನಲ್ಲಿ ಏಕಾತ್ಮತಾ ಮಾಸದ ಅಂಗವಾಗಿ ದಿನಾಂಕ 17-12-85 ರಿಂದ 20-12-85 ರವರೆಗೆ ಏಕಾತ್ಮತಾ ಮಾಸದ ಆಚರಣೆಯನ್ನು ಮಾಡಲಾಯಿತು.

ದಿನಾಂಕ 17 ರಂದು ಗಂಗಾಮಾತೆಯ ಪೂರ್ಣಕುಂಭವನ್ನು ಮತ್ತು ಭಾರತಮಾತೆಯ ಚಿತ್ರಪಟವನ್ನು ಏಕಾತ್ಮತಾ ಕೇಂದ್ರವಾದ ಶ್ರೀ ಕೋದಂಡರಾಮಸ್ವಾಮಿ ದೇವಾಲಯದಲ್ಲಿ ಸ್ಥಾಪಿಸಲಾಯಿತು. ಉದ್ಘಾಟಕರು ಸ್ಥಳೀಯ ವೈಶ್ಯ ಬ್ಯಾಂಕ್ ಮ್ಯಾನೇಜರ್ ಆದ ಶ್ರೀ ರಾಮಾಂಜನೇಯುಲು.

ದಿನಾಂಕ 18 ರಂದು ಭಜನಾ ಕಾರ್ಯಕ್ರಮ ಮತ್ತು ವಿವಿಧ ವಿನೋದಾವಳಿ ಕಾರ್ಯಕ್ರಮಗಳಿದ್ದವು. ಈ ಕಾರ್ಯಕ್ರಮದಲ್ಲಿ ಸ್ಥಳೀಯ ವಿನಾಯಕ ಸೇವಾಸಮಿತಿಯ ಕೋಶಾಧ್ಯಕ್ಷರಾದ ಶ್ರೀ॥ ಆರ್. ಚಿಕ್ಕರೆಡ್ಡಪ್ಪ ಶೆಟ್ಟರು ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ದಿ॥ 19 ರಂದು ಸ್ವಾಮಿ ಸಂತ ಹರಿ ಹರಾನಂದ ಸರಸ್ವತೀಜಿಯವರು ಧರ್ಮದ ಬಗ್ಗೆ ಉಪನ್ಯಾಸ ಮಾಡುತ್ತ "ಹಿಂದೂಗಳಾದ ನಾವು 2 ಸಹಸ್ರ ವರ್ಷಗಳ ಸತತ ನಿದ್ರಾವಸ್ಥೆಯಲ್ಲಿದ್ದುದರಿಂದಲೇ ಅನ್ಯರ ದಾಳಿ ನಮ್ಮಲ್ಲಿ ಸತತವಾಗಿ ಆಗುತ್ತಿದೆ. ಮತ್ತು ನಮ್ಮ ಪವಿತ್ರ ಸ್ಥಳಗಳಾದ ಶ್ರೀರಾಮ ಜನ್ಮಭೂಮಿ, ಮಥುರೆಯ ಶ್ರೀಕೃಷ್ಣ ಜನ್ಮಭೂಮಿ ಮತ್ತು ವಾರಣಾಸಿಯ ವಿಶ್ವನಾಥ ದೇವಾಲಯಗಳೂ ಸಹ ಮುಕ್ತ ದರ್ಶನವಿಲ್ಲದಂತಾಗಿದೆ. ಆದ್ದರಿಂದ ಹಿಂದೂಗಳು ಅವುಗಳ ಮುಕ್ತಿಗಾಗಿ ಹೋರಾಟಕ್ಕೂ ಸಿದ್ಧರಾಗಿ ಜಾಗ್ರತರಾಗಬೇಕೆಂದು ಕರೆನೀಡಿದರು.

ದಿ॥ 20 ರಂದು ತಾಲ್ಲೂಕಿನ ರಾಜೇಂದ್ರಹಳ್ಳಿ, ಬೈರಕೂರು, ನಂಗಲಿ, ನಗವಾರ ಮತ್ತು ದೇವರಾಯಸಮುದ್ರಗಳಿಗೆ ಸ್ವಾಮೀಜಿಯವರು ಭೇಟಿಕೊಟ್ಟು ಹಿಂದೂಗಳನ್ನು ಎಚ್ಚರಿಸಿದರು.

ವರದಿ – ಬಿ. ಎಸ್. ಮುಕುಂದ.

---

## ತಿರುಮಲೆಗೆ
## ಶ್ರೀ ಭೀಷ್ಮನಾರಾಯಣ ಸಿಂಗ್

ಅಸ್ಸಾಂ–ಮೇಘಾಲಯಗಳ ರಾಜ್ಯಪಾಲರಾದ ಶ್ರೀ ಭೀಷ್ಮನಾರಾಯಣಸಿಂಗ್ ಅವರು 18 ರ ಶನಿವಾರ ಮದ್ರಾಸಿನಿಂದ ತಿರುಮಲೆಗೆ ಆಗಮಿಸಿ ಸ್ವಾಮಿಸೇವೆ ಮಾಡಿದರು. ಶ್ರೀಯುತರನ್ನು ತಿರುಮಲೆಯ ತಿ. ತಿ. ದೇ. ಸಹಕಾರ್ಯ ನಿರ್ವಹಣಾಧಿಕಾರಿ ಶ್ರೀ ಚಕ್ರಧರರಾವ್ ಮೊದಲಾದವರು ಸ್ವಾಗತಿಸಿ ದೇವಾಲಯಕ್ಕೆ ಕರೆದುಕೊಂಡು ಹೋದರು. ರಾಜ್ಯಪಾಲರು 19 ರಂದು ಭಾನುವಾರ ತಿರುಮಲೆಯಿಂದ ಹಿಂದಿರುಗಿದರು.

# ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ಶ್ರೀ ಪದ್ಮಾವತಿ ಮಹಿಳಾ ವಿಶ್ವವಿದ್ಯಾನಿಲಯಕ್ಕೆ 1985–86 ರ ಆರ್ಥಿಕ ಸಂವತ್ಸರದ ವೆಚ್ಚಗಳಿಗಾಗಿ ತಿ. ತಿ. ದೇ ಗಳಿಂದ 15 ಲಕ್ಷ ರೂಗಳನ್ನು ನೀಡಲು ಪ್ರಭುತ್ವಕ್ಕೆ ಶಿಫಾರಸು ಮಾಡಲು ತೀರ್ಮಾನಿಸಲಾಯಿತು.

* * * *

ವಿಶಾಖಪಟ್ನಂ ಜಿಲ್ಲೆಯ ಪಾಡೇರುನಲ್ಲಿ, ಅನಂತಪುರಂ ಜಿಲ್ಲೆ ಕೊತ್ತ ಚೆರುವುನಲ್ಲಿ ಕೃಷ್ಣಾ ಜಿಲ್ಲೆಯ ನಂದಿಗಂಗಳಲ್ಲಿ ಕ್ರಮವಾಗಿ 1 ಲಕ್ಷರೂ ಹಾಗೂ ಒಂದು ಎಕರೆ ಭೂಮಿ, 50 ಸಾವಿರರೂ ಹಾಗೂ ಒಂದು ಎಕರೆ ಭೂಮಿ, ಒಂದು ಎಕರೆ ಭೂಮಿ, ಸ್ಥಳೀಯರಿಂದ ವಿರಾಳವಾಗಿ ಬಂದಲ್ಲಿ ಕಲ್ಯಾಣ ಮಂಟಪಗಳನ್ನು ತಿ. ತಿ. ದೇ. ನಿರ್ಮಿಸಲು ತೀರ್ಮಾನಿಸಲಾಯಿತು.

* * * *

ಶ್ರೀಬಾಲಾಜಿ ವಿಕಲಾಂಗ ಸಂಕ್ಷೇಮ ಸಮುದಾಯದ ವತಿಯಿಂದ ದೇಶದ ಇತರೆಡೆಗಳಲ್ಲಿ ಪೋಲಿಯೋ ನಿವಾರಕ ಶಸ್ತ್ರಚಿಕಿತ್ಸಾ ಶಿಬಿರಗಳನ್ನು ಕೈಗೊಳ್ಳುವಂತೆ ನಿರ್ಣಯಿಸಲಾಯಿತು.

* * * *

ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ಅಮ್ಮನವರ ಏಕಾಂತ ಸೇವೆಗಾಗಿ ಬಂಗಾರದ ಮುಲಾಮು ಹಚ್ಚಿದ ತಾಮ್ರದ ಹೊದಿಕೆಯ ಮರದ ಪಲ್ಲಂಗವನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

* * * *

ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯದಲ್ಲಿ ಸ್ವಾಮಿ ಸೇವೆಗಾಗಿ ಮಯೂರವಾಹನ ಹಾಗೂ ಮೂಷಿಕವಾಹನಗಳನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

* * * *

ತಿರುಮಲೆಯಲ್ಲಿ ಆರಣ್ಯಶಾಖೆಯ ವೈರ್‌ಲೆಸ್ ಸ್ಟೇಷನ್, ಹಾಗೂ ಅತಿಥಿಗೃಹ ನಿರ್ಮಾಣಕ್ಕಾಗಿ ಸ್ಥಳ ನೀಡಲು ಒಪ್ಪಲಾಯಿತು.

* * * *

ಪುತ್ತೂರಿನಲ್ಲಿ ನಿಬಂಧನೆಗಳ ಅನುಸಾರವಾಗಿ ಮಧ್ಯಮ ದರ್ಜೆಯ ಕಲ್ಯಾಣ ಮಂಟಪ ನಿರ್ಮಿಸಲು ತೀರ್ಮಾನಿಸಲಾಯಿತು.

* * * *

ಪ್ರತಿವರ್ಷವೂ ತಿರುಮಲೆಯಲ್ಲಿ ಆನಿವರ ಆಸ್ಥಾನದಂದು ತಿ.ತಿ.ದೇ. ವತಿಯಿಂದ ಪುಷ್ಪಪಲ್ಲಕಿಯನ್ನು ನಿರ್ವಹಿಸಲು ತೀರ್ಮಾನಿಸಲಾಯಿತು.

ತಿರುಪತಿಯ ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದ ವಿದ್ಯಾರ್ಥಿಗಳಿಗೆ ಈ ಹಿಂದೆ ನೀಡುತಿದ್ದ ಸಾಲಿಯಾನಾ 10 ವಿದ್ಯಾರ್ಥಿ ವೇತನಗಳ ಜೊತೆಗೆ 15 ಹೆಚ್ಚಿನ ಎಂದರೆ ಒಟ್ಟು 25 ವಿದ್ಯಾರ್ಥಿ ವೇತನಗಳನ್ನು ನೀಡಲು ತೀರ್ಮಾನಿಸಲಾಯಿತು.

* 4 8 *

ತಿರುಮಲೆಯಲ್ಲಿ ನಿರ್ಮಿಸಲಾಗುವ ಸಾವಿರದೆಂಟು ಕೋಣೆಗಳ ಸಪ್ತಗಿರಿ ಧರ್ಮಸತ್ರದ ಒಂದೊಂದು ಕೋಣೆಗೂ 40,000 ರೂಗಳ ದಾನವನ್ನು ಸ್ವೀಕರಿಸಲು ತೀರ್ಮಾನಿಸಲಾಯಿತು.

* * * *

ಹತಿರಾಮಜೀ ಮಠದ ನಿರ್ವಹಣೆಯನ್ನು ಪರಿಪಾಲನೆಯನ್ನು ಆದರ ಆಸ್ತಿಪಾಸ್ತಿಗಳೊಂದಿಗೆ ತಿ. ತಿ. ದೇ. ಕೈಗೆತ್ತಿಕೊಳ್ಳುವ ಯೋಜನೆಯನ್ನು ಪರಿಶೀಲಿಸಬೇಕೆಂದು ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಕಮೀಷನರಿಗೆ ಪ್ರತಿಪಾದನೆಯನ್ನು ಕಳುಹಿಸಲು ತೀರ್ಮಾನಿಸಲಾಯಿತು.

* * * *

ತಿರುಮಲೆ ತಿರುಪತಿಗಳ ಹೊರಗೆ ಕೆಲಸ ಮಾಡುವ ತಿ. ತಿ. ದೇ. ಉದ್ಯೋಗಗಳು ಉದ್ಯೋಗ ನಿರ್ವಹಣೆಯಲ್ಲಿ ತಿರುಪತಿಗೆ ಬಂದಾಗ ಅವರಿಗೆ ಒಂದನೇ ಸತ್ರದಲ್ಲಿ ವಸತಿಯನ್ನು ಕಲ್ಪಿಸಲು ತೀರ್ಮಾನಿಸಲಾಯಿತು.

* * * *

ಪ್ರಕಾಶಂ ಜಿಲ್ಲೆಯ ಮದ್ದಿಪಾಡು, ನಿಜಾಮಾಬಾದ್ ಜಿಲ್ಲೆಯ ಆರಮೂರು, ಪ್ರಕಾಶಂ ಜಿಲ್ಲೆಯ ಟಂಗಟೂರುಗಳಲ್ಲಿ ಮಧ್ಯಮದರ್ಜೆಯ ಕಲ್ಯಾಣ ಮಂಟಪಗಳನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

* * * *

ಭೀಮವರದ ಶ್ರೀ ವೆಂಕಟೇಶ್ವರ ಮೂಗಬಧಿರ ಪಾಠಶಾಲೆಯನ್ನು ತಿ. ತಿ. ದೇ. ಗಳ ಒಂದು ಗವರ್ನಿಂಗ್ ಬಾಡಿಯ ಮೂಲಕ ವಾರ್ಷಿಕ ವೆಚ್ಚವನ್ನು ತಿ.ತಿ ದೇ ಗಳೂ, ಇಡಿಗಂಟಿನ ವೆಚ್ಚವನ್ನು ಶಾಲಾಕಮಿಟಿ ಹಾಗೂ ತಿ. ತಿ. ದೇ. ಗಳೆರಡೂ ಸಮವಾಗಿ ವಹಿಸಿಕೊಂಡು ಶಾಲಾಭವನ ಮತ್ತಿತರ ಆಸ್ತಿ ತಿ. ತಿ. ದೇ. ಗಳ ವಶದಲ್ಲಿರುವಂತೆಯೂ ನಡೆಸಲು ತೀರ್ಮಾನಿಸಲಾಯಿತು.

* * * *

ನಲ್ಗೊಂಡ ಜಿಲ್ಲೆಯ ಸೂರ್ಯಾಪೇಟೆಯಲ್ಲೂ, ಚಿತ್ತೂರಿನ ಪೀಲೇರುವಿನಲ್ಲೂ ಮಧ್ಯಮ ತರಗತಿಯ ಕಲ್ಯಾಣಮಂಟಪಗಳನ್ನು ನಿಬಂಧನೆಗಳ ಪ್ರಕಾರ ನಿರ್ಮಿಸಲು ತೀರ್ಮಾನಿಸಲಾಯಿತು, ★

# ವಾರ್ತಾಹರಿ

## ವಿವೇಕಾನಂದ ಕೇಂದ್ರದ ಗ್ರಾಮೀಣ ಶಿಕ್ಷಣ ಯೋಜನೆಗೆ ತಿ. ತಿ. ದೇ. ಆರ್ಥಿಕ ನೆರವು

ವಿವೇಕಾನಂದ ಕೇಂದ್ರಕ್ಕೆ ಆದರ 'ಕನ್ಯಾಕುಮಾರಿ, ತಿರುನಲ್ವೇಲಿ, ರಾಮನಾಥಪುರಂ ಜಿಲ್ಲೆಗಳ 'ಗ್ರಾಮೀಣ ಶಿಕ್ಷಣ ಯೋಜನೆ'ಗೆ ಈ ವರ್ಷ 7.68 ಲಕ್ಷ ರೂ.ಗಳ ಆರ್ಥಿಕನೆರವನ್ನು ನೀಡಲಾಗುವುದು ಎಂದು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ತಿಳಿಸಿದರು.

ತಿ. ತಿ. ದೇ. ಆಡಳಿತ ನಿರ್ವಾಹಕ ಮಂಡಳಿಯ ಸಭೆಯ ಬಗ್ಗೆ ವಿವರಿಸುತ್ತ ಶ್ರೀಯುತರು ಕೇಂದ್ರವು ಸಾಮಾಜಿಕ ಸಾಂಸ್ಕೃತಿಕ ಅಂಶಗಳು ಹಾಗೂ ಸನಾತನ ಧರ್ಮದ ಬಗ್ಗೆ ಬಾಲಕರಿಗಾಗಿ 110 ಶಿಕ್ಷಣ ಶಿಬಿರಗಳನ್ನೂ, ಬಾಲಕಿಯರಿಗಾಗಿ 55 ಶಿಕ್ಷಣ ಶಿಬಿರಗಳನ್ನು ನಡೆಯುವುದು ಎಂದೂ, ಕುಡಿಯುವ ನೀರನ್ನು ದೊರಕಿಸುವುದು, ಬಾವಿಗಳಲ್ಲಿನ ಆಳವನ್ನು ಹೆಚ್ಚಿಸುವುದು, ನೇತ್ರ, ಚರ್ಮ, ಚಿಕಿತ್ಸಾಶಿಬಿರಗಳನ್ನು ಏರ್ಪಡಿಸುವುದು, ವೈದ್ಯಕೀಯ ಸೌಲಭ್ಯಕೇಂದ್ರಗಳನ್ನೂ, ಬಾಲವಾಡಿಗಳನ್ನೂ, ಗೀತಾ ತರಗತಿಗಳನ್ನೂ ಏರ್ಪಡಿಸುವುದೂ– ಇವು ಯೋಜನೆಯ ಹಲವು ಕಾರ್ಯಕ್ರಮಗಳು ಎಂದರು.

ಕೇಂದ್ರವು 500 ಗ್ರಾಮಗಳಲ್ಲಿ 20,000 ಮಂದಿ ಮಕ್ಕಳಿಗಾಗಿ ಧಾರ್ಮಿಕ ತರಗತಿಗಳನ್ನು ನಡೆಸಿ, ಧಾರ್ಮಿಕ ಪುಸ್ತಕ, ನಿಯತ ಕಾಲಿಕಗಳನ್ನು ಹೊರತರಲು ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ.

## ವಿಜಯವಾಡದಲ್ಲಿ ತಿ. ತಿ. ದೇ. ಕಲ್ಯಾಣಮಂಟಪದ ಉದ್ಘಾಟನೆ

ವಿಜಯವಾಡದಲ್ಲಿ ತಿ. ತಿ. ದೇವಸ್ಥಾನಗಳ ಕಲ್ಯಾಣಮಂಟಪವನ್ನು ಈಚೆಗೆ (ಜನವರಿ 26 ರಂದು) ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣ ರಾಜು ಅವರ ಅಧ್ಯಕ್ಷತೆಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್ ಅವರು ಉದ್ಘಾಟಿಸಿದರು. ಎರಡು ಅಂತಸ್ತಿನ ಈ ಕಲ್ಯಾಣ ಮಂಟಪದಲ್ಲಿ ಧಾರ್ಮಿಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲೂ ಅನುಕೂಲ ಮಾಡಿಕೊಡಲಾಗಿದೆ. (ಉದ್ಘಾಟನಾಸಭೆಯ ಚಿತ್ರವನ್ನು ಒಳಗಿನ ರಕ್ಷಾಪತ್ರದಲ್ಲಿ ಕಾಣಬಹುದು)

## ೧. ೫೭ ಲಕ್ಷರೂಗಳ ಆಭರಣಗಳ ಹರಾಜು.

ತಿ. ತಿ. ದೇ. ಪರಿಪಾಲನಾ ಭವನ ಪ್ರಾಂಗಣ ೨ ಮೂರುದಿನಗಳ ಕಾಲ ನಡೆದ ಹರಳುಗಳ ಂಗಾರದ ಆಭರಣಗಳ ಹರಾಜಿನಲ್ಲಿ 58 ಕೆ ಜಿ. ೂಕದ ಆಭರಣಗಳಿಂದ 81. 57 ಲಕ್ಷರೂಗಳ ರಾಯವುಂಟಾಯಿತೆಂದು ವರದಿಯಾಗಿದೆ. ರಿಂದಾಗಿ ಇಲ್ಲಿಯವರೆಗೆ 670 ಕಿಲೋ ಂಗಾರದ ಆಭರಣಗಳ ಹರಾಜಿನಿಂದಾಗಿ ತಿ. ದೇ. ಗಳಿಗೆ 8 ಕೋಟಿ 80 ಲಕ್ಷ ಆದಾ ಯವಾಗಿದೆ. ಈ ಬಾರಿಯ ಹರಾಜಿನಲ್ಲಿ ಆಂಧ್ರ ದೇಶ, ಕರ್ನಾಟಕ, ತಮಿಳುನಾಡುಗಳ 57 ಂದಿ ಭಾಗವಹಿಸಿ ಆಭರಣಗಳನ್ನು 239 ಂಪುಗಳಲ್ಲಿ ಕೊಂಡರು. ಈ ಹರಾಜು ಕಾರ್ಯ ಮ ತಿ. ತಿ. ದೇ. ಚೀಫ್ ಅಕೌಂಟ್ಸ್ ಆಫೀಸರ್ ೀ ಬಿ. ಈಶ್ವರಯ್ಯ ಅವರ ಉಸ್ತುವಾರಿಯಲ್ಲಿ ನಡೆ ಿತು.

## ಶ್ರೀಪದ್ಮಾವತಿ ಅಮ್ಮನವರಿಗೆ ೩ ಲಕ್ಷದ ಕಾಣಿಕೆ

ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನ ರಿಗೆ ಭಕ್ತರೊಬ್ಬರು 3 ಲಕ್ಷ ರೂಗಳ ಬೆಲೆಬಾ ಳುವ ಬಂಗಾರ ಬೆಳ್ಳಿ ವಸ್ತುಗಳನ್ನು ಈಚೆಗೆ ಮರ್ಪಿಸಿದರು. ಇದರಲ್ಲಿ 1632 ಗ್ರಾಂ ಬಂಗಾ ದ ಬಟ್ಟಲು, 84 ಗ್ರಾಂಗಳ ಬಂಗಾರದ ಚಮಚ ರಡು ಕಿಲೋಗಳಿಗೂ ಹೆಚ್ಚಿನ ತೂಕದ ಎರಡು ಳ್ಳಿ ತಟ್ಟೆಗಳೂ ಇವೆಯೆಂದು ಆಲಯ ೀಷ್ಕಾರ್ ಶ್ರೀ ವೆಂಕಟಸುಬ್ಬಯ್ಯ ತಿಳಿಸಿದರು. ಈ ಾಣಿಕೆಯನ್ನು ನೇರವಾಗಿ ನೀಡಿದರೂ ತಮ್ಮ ೆಸರು ತಿಳಿಸಲು ಭಕ್ತರು ನಿರಾಕರಿಸಿದರೆಂದು ವರದಿಯಾಗಿದೆ.

## ತಿರುಪತಿಯಲ್ಲಿ ಶ್ರೀಮತಿ ಕುಮುದ್‌ಬೆನ್‌ಜೋಷಿ

ಆಂಧ್ರಪ್ರದೇಶದ ಗೌರ್ನರ್ ಶ್ರೀಮತಿ ಕುಮುದ್ ಬೆನ್ ಜೋಷಿ ಅವರು ಜನವರಿಯಲ್ಲಿ ತಿರುಪತಿಯಲ್ಲಿನ ತಿ. ತಿ. ದೇ. ಮಾನವ ಸೇವಾ ವಿಭಾಗಗಳನ್ನು ಸಂದರ್ಶಿಸಿದರು.

ಶ್ರೀಮತಿ ಕುಮುದ್‌ಬೆನ್‌ಜೋಷಿ ಅವರು ಮೊದಲು ಎಸ್. ವಿ. ಪೂರ್ ಹೋಂ (ಕುಷ್ಠ ರೋಗ ನಿವಾರಣಾ ಆಸ್ಪತ್ರೆ)ಯನ್ನು ಸಂದರ್ಶಿ ಸಿದರು. ಅಲ್ಲಿ ನಡೆದ ಜಾನಪದ ನೃತ್ಯವನ್ನು ನೋಡಿ ಸಂತಸಪಟ್ಟು, ಶ್ರೀ ಬಾಲಾಜಿ ಕೃತ್ರಿಮ ಅವಯುವ ನಿರ್ಮಾಣ ಕೇಂದ್ರವನ್ನು ನೋಡಿ, ಪೋಲಿಯೋ ಪೀಡಿತ ಮಕ್ಕಳ ಬಗ್ಗೆ ಅವೇದನೆ



ಯನ್ನು ವ್ಯಕ್ತಪಡಿಸುತ್ತ, ಅಲ್ಲಿ ಕೃತ್ರಿಮ ಅವಯವ ಗಳ ತಯಾರಿಕೆಯಲ್ಲಿ ನಿರತರಾದ ವಿಕಲಾಂಗರನ್ನು ಗಮನಿಸಿ, ಕೃತ್ರಿಮವಾದ ಬಲಗೈಹೊಂದಿದ ಬಾಲಕನೊಬ್ಬನಿಂದ ಹೂವಿನ ಗುಚ್ಛವನ್ನು ಸ್ವೀಕರಿಸಿದರು. ನಂತರ ವಿಕಲಾಂಗ ತರಬೇತಿ ಕೇಂದ್ರದಲ್ಲಿನ ವಿವಿಧ ತರಬೇತಿ ವಿಭಾಗವನ್ನು ದರ್ಶಿಸಿ ಎಸ್. ವಿ. ಬಾಲಮಂದಿರ ಹಾಗೂ ಮೂಗಬಧಿರ ಪಾಠಶಾಲೆಯನ್ನೂ ಸಂದರ್ಶಿಸಿದರು.

ಮೊದಲಿಗೆ ತಿರುಪತಿಯ ಶ್ರೀ ಗೋವಿಂದ ರಾಜಸ್ವಾಮಿ ದೇವಾಲಯವನ್ನು ಸಂದರ್ಶಿಸಿ ಶ್ರೀಮತಿ ಕುಮುದ್ ಬೆನ್ ಜೋಷಿ ಸ್ವಾಮಿಯನ್ನು ಆರಾಧಿಸಿದರು. ದೇವಾಲಯದ ಬಳಿ ಅವರನ್ನು ತಿ ತಿ ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಉಪ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಆರ್. ವಾಸುದೇವ ನಾಯುಡು ಅವರುಗಳು ಆಲಯ ಮರ್ಯಾದೆ ಗಳೊಂದಿಗೆ ಸ್ವಾಗತಿಸಿದರು ಮೊದಲಬಾರಿಗೆ ತಿ. ತಿ. ದೇ. ದೇವಸ್ಥಾನವನ್ನು ರಾಜ್ಯಪಾಲಿಕೆ ಸಂದರ್ಶಿಸಿದ ನೆನಪಿನಲ್ಲಿ ತಿರುಮಲೇಶನ ಶೇಷವಸ್ತ್ರ ವನ್ನು ಅವರಿಗೆ ನೀಡಲಾಯಿತು.



ಶ್ರೀಮತಿ ಕುಮುದ್‌ಬೆನ್‌ಜೋಷಿಯವರು ತಿ. ತಿ. ದೇಗಳ ಕೃತಕ ಅವಯುವ ನಿರ್ಮಾಣ ಕೇಂದ್ರಕ್ಕೆ ಭೇಟಿ ಕೊಟ್ಟಾಗ ತೆಗೆದ ಎರಡು ಚಿತ್ರಗಳು.



ಶ್ರೀಗೋವಿಂದರಾಜಸ್ವಾಮಿ ದೇವಾಲಯದಲ್ಲಿ ಶ್ರೀಮತಿ ಕುಮುದ್ ಬೆನ್ ಜೋಷಿ ಅವರಿಗೆ ಸ್ವಾಮಿಯ ಶೇಷ ವಸ್ತ್ರ ಸನ್ಮಾನ

## ತಿರುಮಲೇಶನಿಗೆ ವಿದೇಶೀ ಕರೆನ್ಸಿ

ಪ್ರತಿವರ್ಷವೂ ತಿರುಮಲೇಶನಿಗೆ ಏಳೆಂಟು ಲಕ್ಷ ರೂಗಳ ಬೆಲೆಬಾಳುವ ವಿದೇಶೀ ಕರೆನ್ಸಿ ಆದಾಯವಿದೆ. ಇದರಂತೆ ಸರಾಸರಿ ತಿಂಗಳ 60 ಸಾವಿರರೂಗಳ ಸಮನಾದ ವಿದೇಶೀ ನಾಣ್ಯ ನೋಟುಗಳು ಹುಂಡಿಯಲ್ಲಿ ಬೀಳುತ್ತವೆಯೆಂದಾಯಿತು. 1984 ರ ಏಪ್ರಿಲ್‌ನಿಂದ 1985 ರ ಮಾರ್ಚ್‌ವರೆಗೆ 8 ಲಕ್ಷ 60 ಸಾವಿರ ಬೆಲೆಬಾಳುವ ವಿದೇಶೀ ನಾಣ್ಯ ನೋಟುಗಳು ಕಾಣಿಕೆಯಾಗಿ ಸಂದಿದ್ದು, 1985 ರ ಏಪ್ರಿಲ್‌ನಿಂದ ನವಂಬರ್‌ವರೆಗೆ ಸುಮಾರು 4, 99, 500 ರೂಗಳ ಬೆಲೆಯ ವಿದೇಶೀ ನಾಣ್ಯ–ನೋಟುಗಳು ಸಂದಿವೆ. ಹೋದ ವರ್ಷ ಜೂನ್ ತಿಂಗಳಲ್ಲಿ 1. 8 ಲಕ್ಷ ರೂ. ಬೆಲೆಯ ಕರೆನ್ಸಿ ಸಂದಿದ್ದರೆ ಮೇ ತಿಂಗಳಲ್ಲಿ ಕೇವಲ 31 ಸಾವಿರ ರೂಗಳ ಆದಾಯವಾಗಿದೆ. ಜೂನ್ ತಿಂಗಳಿನಲ್ಲಿ ಹೆಚ್ಚಿನ ಆದಾಯವೆನ್ನಬಹುದು. ಈ ವಿದೇಶೀ ಕರೆನ್ಸಿಯಲ್ಲಿ ಹೆಚ್ಚಿಗೆ ಅಮೆರಿಕನ್ ಹಾಗೂ ಅರಬ್ ದೇಶಗಳ ಧನವೇ ಇರುತ್ತದೆ. ವಿದೇಶಗಳಲ್ಲಿರುವ ಭಾರತೀಯರು ಹಾಗೂ ವಿದೇಶೀಯರೂ ತಿರುಮಲೆಯತ್ತ ಆಕರ್ಷಿತರಾಗುತ್ತಿರುವುದರಿಂದ ಈ ರೀತಿಯ ಆದಾಯವುಂಟಾಗುತ್ತಿದೆ.

ತಿ. ತಿ. ದೇ. ಗಳ ಹುಂಡಿಯ ಮೂಲಕ ಬರುವ ವಿದೇಶೀ ನಾಣ್ಯ ನೋಟುಗಳನ್ನು ಸ್ಥಳೀಯ ಆಂಧ್ರ ಬ್ಯಾಂಕ್, ಸ್ಟೇಟ್ ಬ್ಯಾಂಕ್‌ಗಳು ಭಾರತೀಯ ನಾಣ್ಯ ನೋಟುಗಳಿಗೆ ಪರಿವರ್ತಿಸಿ ನೀಡುತ್ತಿದ್ದಾರೆ. ಅವರು ಈ ಪರಿವರ್ತನೆಯಲ್ಲಿ ಯಾವುದೇ ಕಮೀಷನ್ ಪಡೆಯದೆ ಉಚಿತವಾಗಿಯೇ ಈ ಕಾರ್ಯ ನಿರ್ವಹಿಸುತ್ತಿದ್ದಾರೆ.

## ಡಾ॥ ಅರ್ಕಸೋಮಯಾಜಿ ನಿಧನ

ಆಂಧ್ರಪ್ರದೇಶದ ಖ್ಯಾತ ವಿದ್ವಾಂಸ ಡಾ॥ ಧೂಳೀಪಾಳ ಅರ್ಕಸೋಮಯಾಜಿ ಅವರು ದಿನಾಂಕ 10–1–86 ರಂದು ನಿಧನರಾದರೆಂದು ತಿಳಿಸಲು ವಿಷಾದವಾಗುತ್ತದೆ.

ಗೋದಾವರೀ ತೀರದ ವೆಲಿಚರು ಗ್ರಾಮದಲ್ಲಿನ ವೇದಪಂಡಿತರ ಕುಟುಂಬದಲ್ಲಿ 72 ವರ್ಷದ ಹಿಂದೆ ಹುಟ್ಟಿದ ಶ್ರೀಯುತರು ಪ್ರಕಾಂಡ ಸಂಸ್ಕೃತ, ತೆಲುಗು, ಆಂಗ್ಲ, ಗಣಿತ, ಜ್ಯೋತಿಷ್ಯ, ಖಗೋಳ, ವಿದ್ವಾಂಸರಾಗಿದ್ದು, ಭೀಮವರದಲ್ಲಿ ಕಾಲೇಜೀ ಪ್ರಾಂಶುಪಾಲರಾಗಿದ್ದು, ತಿರುಪತಿಯ ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದಲ್ಲಿ ರೀಡರ್ ಆಗಿದ್ದು, ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕಾರ್ಯದರ್ಶಿಗಳಾಗಿ ಬಹುಕಾಲ ಕೆಲಸ ಮಾಡಿ, ಈಚೆಗೆ ಸೃಜನಾತ್ಮಕ ಹಾಗೂ ಪರಿಶೋಧನಾಧಿಕಾರಿಯಾಗಿ ಕಾರ್ಯ ಮಾಡುತ್ತಿದ್ದರು.

ಶ್ರೀಯುತರಿಗೆ ಅವರ ಸಂಸ್ಕೃತದ ವಿಶೇಷ ಸೇವೆಗಾಗಿ ರಾಷ್ಟ್ರಪತಿಗಳ ಬಹುಮಾನವೂ ಸಂದಿದೆ. ಶ್ರೀಯುತರು ರಚಿಸಿದ "ಪ್ರಸನ್ನಾಂಜನೇಯಂ (ಸಂಸ್ಕೃತ), ವಾಟ್ ಎ ವಂಡರ್‌ಫುಲ್ ಯೂನಿವರ್ಸ್, (ಆಂಗ್ಲ) ಜ್ಯೋತಿರ್ವಿಜ್ಞಾನಂ (ಸಂಸ್ಕೃತ) ಬ್ರಹ್ಮಾಂಜಲಿ (ಸಂಸ್ಕೃತ) ಎ ಕ್ರಿಟಿಕಲ್ ಸ್ಟಡಿ ಆಫ್ ದಿ ಏನ್ಸಿಯೆಂಟ್ ಹಿಂದೂ ಆಸ್ಟ್ರಾನಮಿ (ಕರ್ನಾಟಕ ವಿಶ್ವವಿದ್ಯಾನಿಲಯದ ಪಿ ಎಚ್. ಡಿ. ಪ್ರಬಂಧ) ಭಾಸ್ಕರನ ಸಿದ್ಧಾಂತ ಶಿರೋಮಣಿಯ ವ್ಯಾಖ್ಯೆ (ಆಂಗ್ಲ) ಪಾತಂಜಲ ಯೋಗ ದರ್ಶನಂ (ತೆಲುಗು) ಸುಭಾಷಿತಮುಲು (ತೆಲುಗು) ಭಗವದ್ಗೀತೆಯ ಸಾರ (ಆಂಗ್ಲ) ಶ್ರೀಮತ್ ಸೀತಾರಾಮಾಂಜನೇಯಂ (ಆಂಗ್ಲ) ಖಂಡಖಾದ್ಯ ಸಾಹಸ್ರಿಕಾ (ಸಂಸ್ಕೃತ) ಮೊದಲಾಗಿ ಹಲವು ಹನ್ನೊಂದು ಕೃತಿಗಳು ಪ್ರಕಟವಾಗಿ ಬಹುಜನಪ್ರಿಯವಾಗಿದೆ. ಮರಣೋತ್ತರ ಜೀವನ (ಆಂಗ್ಲ) ಮೊದಲಾದ ಅನೇಕ ಕೃತಿಗಳು ಪ್ರಕಟಿತವಾಗ ಬೇಕಿವೆ.

ಕಂಚಿ ಕಾಮಕೋಟಿ ಪೀಠದ ಶಿಷ್ಯರೂ, ಶ್ರೀನಿವಾಸನ ಅವಿಚ್ಛಿನ್ನ ಭಕ್ತರೂ ಆದ ಶ್ರೀಯುತರು ಹೆಂಡತಿ ಹಾಗೂ ಒಬ್ಬ ದತ್ತು ಪುತ್ರರನ್ನೂ ಅಗಲಿದ್ದಾರೆ. ಅವರ ಅಗಲುವಿಕೆಯಿಂದ ಆದ ವಿವಿಧಮುಖದ ನಷ್ಟ ತುಂಬಲಾಗದ್ದು ಎಂದು ಹೇಳಬಹುದು.

## ನೇತ್ರ ಚಿಕಿತ್ಸಾ ಶಿಬಿರ

ತಿ. ತಿ. ದೇವಸ್ಥಾನಗಳ ವತಿಯಿಂದ ಪ್ರತಿವರ್ಷವೂ ತಿರುಪತಿಯಲ್ಲಿ ನಡೆಯುವ ನೇತ್ರಚಿಕಿತ್ಸಾ ಶಿಬಿರವು ಈ ಬಾರಿ ಜನವರಿ ತಿಂಗಳಿನ 18 ರಂದು ಆರಂಭವಾಯಿತು. 18 ರಂದು ನೇತ್ರ ರೋಗಿಗಳ ಪರೀಕ್ಷೆಯೂ, 19 ರಂದು ಶಸ್ತ್ರ ಚಿಕಿತ್ಸೆಗಳೂ ನಡೆದುವು.

ತಿರುಪತಿಯ ಮೂರನೇ ಸತ್ರದಲ್ಲಿ ನೇತ್ರ ಚಿಕಿತ್ಸಾ ಶಿಬಿರವನ್ನು ಉದ್ಘಾಟಿಸುತ್ತ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್ ಲಕ್ಷ್ಮೀನಾರಾಯಣ ಅವರು ತಿ. ತಿ. ದೇವಸ್ಥಾನಗಳ ವತಿಯಿಂದ ಒಂದು ನೇತ್ರ ಬ್ಯಾಂಕ್ ಅನ್ನು ಸ್ಥಾಪಿಸುವ ಸಾಧ್ಯತೆಗಳನ್ನು ಕುರಿತು ಆಲೋಚನೆ ನಡೆಯುತ್ತಿರುವುದಾಗಿ ನುಡಿಯುತ್ತ, ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾಯರು ಕರೆಕೊಟ್ಟಂತೆ ವೈದ್ಯಕೀಯ ಸೌಲಭ್ಯಗಳನ್ನು ಹೆಚ್ಚಿಸುವ ಹಾದಿಯಲ್ಲಿ ಅಂಧರಿಗಾಗಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಯೋಜಿಸಲಾಗುತ್ತಿದೆ, ತಿರುಪತಿಯ ರೂಯಾ ಆಸ್ಪತ್ರೆಯ ನೇತ್ರ ಚಿಕಿತ್ಸಾ ವಿಭಾಗಕ್ಕೆ ಒಂದು ಲಕ್ಷ ರೂ ಮೌಲ್ಯದ ಯಂತ್ರೋಪಕರಣಗಳನ್ನು ದಾನವಾಗಿ ನೀಡಲಾಗಿದೆಯೆಂದರು.

ಅದೇ ಸಭೆಯಲ್ಲಿ ಮಾತನಾಡುತ್ತ ಹೈದರಾಬಾದಿನ ಸರೋಜಿನಿ ದೇವಿ ಕಣ್ಣಿನ ಆಸ್ಪತ್ರೆಯ ಸೂಪರಿಂಟೆಂಡೆಂಟ್ ಡಾ॥ ರಂಗಾರೆಡ್ಡಿಯವರು ಜನತೆಯಲ್ಲಿ ನೇತ್ರದಾನದಬಗ್ಗೆ ಇರುವ ಅಪಾರ್ಥಗಳನ್ನು ನಿವಾರಿಸುವಲ್ಲಿ ಪತ್ರಿಕೆಗಳು ಮಹತ್ತರವಾದ ಕೆಲಸಮಾಡಬೇಕಿದೆಯೆಂದು ಕರೆನೀಡಿದರು.

ಪ್ರಸ್ತುತ ತಿರುಪತಿಯ ನೇತ್ರ ಚಿಕಿತ್ಸಾ ಶಿಬಿರದಲ್ಲಿ ಶಸ್ತ್ರ ಚಿಕಿತ್ಸೆಗೆ ಒಳಗಾದವರಿಗೂ, ಅವರ ಒಬ್ಬೊಬ್ಬ ಸಹಾಯಕರಿಗೂ ತಿ. ತಿ. ದೇ. ಉಚಿತ ಊಟ, ವಸತಿಗಳನ್ನು ಏರ್ಪಡಿಸಿದ್ದಿತು.

ತಿರುಪತಿಯ ಶಿಬಿರದಲ್ಲಿ 1650 ಮಂದಿಯ ನೇತ್ರಪರೀಕ್ಷೆಯೂ 200 ಮಂದಿಯ ಶಸ್ತ್ರ ಚಿಕಿತ್ಸೆಯೂ ನಡೆದವು.

**Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.**

